# ಕೊರವಂಜಿ




ಜನವರಿ ೧೯೪೪

ಮಾಸ ಪತ್ರಿಕೆ

ಸಂಪಾದಕರು :
ಶ್ರೀ|| ರಾ. ಶಿ.

ಚಿತ್ರಕಾರರು :
ಶ್ರೀ|| ಆರ್. ಕೆ. ಲಕ್ಷ್ಮಣ್

ಬರಹಗಾರರು :

ಶ್ರೀ|| ಕೊ. ಬೀ.
ಶ್ರೀ|| ಪಾಟಾಳಿ
ಶ್ರೀ|| ಎಸ್. ಎಸ್ ಶಿ.
ಶ್ರೀ|| ಕೋಸಂಬ್ರಿ
ಶ್ರೀ|| ಬೀರಣ್ಣ
ಶ್ರೀ|| ಖಾರಾಂತ

ಬಿಡಿ ಪತ್ರಿಕೆ - - ಕೇವಲ ಎರಡಾಣೆ

## ಶ್ರೀ ನಗೆಯ ಮಾಸ ಪತ್ರಿಕೆ.

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೨—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೨—೦**

---

## ವಿಷಯಾನುಕ್ರಮಣಿಕೆ

ಸಕಲವೂ ಪ್ರಿಯವಾದ

ಸಮರ ಕಾಲದಲ್ಲಿ



- ನಿಮಗೆ ಪ್ರಿಯವಾದ -

# "ರಾಜಾ ಸ್ನೋ"

ವನ್ನು ಜಾಗರೂಕತೆಯಿಂದ ಉಪಯೋಗಿಸಿ



# ಜಬ್ ಕೊ

ಸುಪ್ರಸಿದ್ಧ ಭಾರತೀಯ
ತಯಾರಿಕೆಗಳ ಅಂಕಿತ.
ಅವುಗಳು ಉತ್ಕೃಷ್ಟತೆ
ಬೆಲೆ ಇವುಗಳನ್ನು ಸರಿತೂಗಿಸುತ್ತವೆ.
ಪರದೇಶೀಯರಿಂದಲೂ
ಮನ್ನಣೆ ಪಡೆದಿರುವುವು.





# ಕು ಹ ಕಿ ಡಿ ಗ ಳು

---

ಶಿವಮೊಗ್ಗೆಯ ಕರ್ಣಾಟಕ ಪರಿಷತ್ತಿನಲ್ಲಿಯೂ ಕೂಡ ಯಶಸ್ವಿಯಾದ ಆಹಾರ ಸಮ್ಮಿಳನ ವಾಯ್ತಂತೆ.

✤ ✤ ✤

ನಡೆದ ಚುನಾವಣೆಗಳಲ್ಲಿ ಶ್ರೀ........ಯರು, ರೂ. ೮೪೬ ರಿಂದ ಜಯಶೀಲ ರಾದರು.

—ಅಂದರೆ, ಎಷ್ಟು 'ಓಟು'ಗಳಿಂದ.

✤ ✤ ✤

ಸುಪ್ರಸಿದ್ಧ ಬೆಂಜಮಿನ ಫ್ರಾಂಕ್‌ಲಿನ್ನನು ಲೋಕದಲ್ಲಿ ಎರಡೇ ಸ್ಥಿರ.— " ಸಾವು, ತೆರಿಗೆಗಳು "—ಎಂದನಂತೆ.

—ಅದು ಸುಳ್ಳು.—" ತೆರಿಗೆಗಳು, ಸಾವು "—ಎಂದನ್ನಬೇಕಾಗಿತ್ತು.

✤ ✤ ✤

ಕೋರೆ ಕೋರೆಯಾಗಿ ರುಮಾಲನ್ನು ಏಕೆ ಸುತ್ತುತ್ತಾರೆ ಎಂದು ವಾಚಕ ರೊಬ್ಬರ ಪ್ರಶ್ನೆ.—

—ಇದಕ್ಕೂ ಒಂದು ಕಾರಣವಿರಬೇಕು—ಆದರೆ ನಮಗೆ ತಿಳಿಯದು.

✤ ✤ ✤

" ಹೋಟಲಿನಲ್ಲೊಬ್ಬನು ಹೃದಯಸ್ತಂಭನದಿಂದ ಮರಣ ಹೊಂದಿದನು"—
ಪತ್ರಿಕೆಯ ಸುದ್ದಿ.

—ಯಾಕೆ ಬಿಲ್ಲು ನೋಡಿದ ಮೇಲೆ ಹೀಗಾಯಿತೇ?

* * *

ಮದರಾಸಿನಲ್ಲಿ ಪಾನ ನಿರೋಧವು ನಿಲ್ಲಿಸಲ್ಪಟ್ಟಿದೆಯಂತೆ.

—ಉಪವಾಸ ಸಾಯುವ ಬದಲು ಕುಡಿದೇ ಸಾಯಲಿ ಎಂತಲೋ?

* * *

ಇತ್ತೀಚೆಗೆ ಮಾನನಷ್ಟ ಮೊಕದ್ದಮೆಗಳು ತೀರ ಕಡಿಮೆಯಂತೆ.

—ಯುದ್ಧಕಾಲದಲ್ಲಿ ಮಾನವೇನು ಅವಮಾನ.

* * *

ಯುದ್ಧವು ಇನ್ನು ಎರಡು ತಿಂಗಳಿನಲ್ಲಿಯೇ ಮುಗಿಯುತ್ತದೆ ಎಂದು ಜ್ಯೋತಿಷ್ಕರೊಬ್ಬರು ಹೇಳಿದ್ದಾರಂತೆ.

—ಹೀಗೆಯೇ ಹೇಳುತ್ತಲಿದ್ದರೆ, ಇನ್ನೆರಡು ತಿಂಗಳಿನಲ್ಲಿ ಅವರನ್ನು ಯಾರಾದರೂ ಮುಗಿಸುತ್ತಾರೆ.

* * *

ಮಂಗಳೂರು ಬೆಂಗಳೂರು ಎರಡು ಪಟ್ಟಣಗಳೂ ಕನ್ನಡ ಭಾಷೆಯೊಂದರಿಂದಲೇ ಬೇರೆ ಬೇರೆಯಾಗಿರುವುವು.

———o———

ಪ್ರಧಾನಾಮಾತ್ಯ ಚರ್ಚಿಲ್ಲರಿಗೆ ಈಗ ಶ್ವಾಸಕೋಶದ ಬಾಯಿಲೆಯು ಗುಣವಾಗಿದೆಯಂತೆ.

—ಶ್ರೀಯುತ ಅಮೆರಿಯವರು ಸರಾಗವಾಗಿ ಉಸಿರಾಡುತ್ತಿದ್ದಾರಂತೆ.

* * *

# ಉರಿಗಾಳು

“ ಅಮ್ಮಾ! ಪೋಲೀಸಿನವರು ಸ್ವರ್ಗಕ್ಕೆ ಹೋಗುತ್ತಾರೆಯೇ ? ”

“ ಇಲ್ಲ, ಮಗೂ ! ಸ್ವರ್ಗದಲ್ಲಿ ಪೋಲೀಸರು ಬೇಕಿಲ್ಲವಲ್ಲಾ ”

* * *

“ ಡಾ|| ಕೆ. ಪಿ. ಬೇಳೆಯವರ ಜ್ವರಗಡ್ಡೆ ಗುಳಿಗೆಗಳು ಇಪ್ಪತ್ತು ವರ್ಷಗಳಿಂದ ಒಂದೇ ಸಮನೆ ವೃದ್ಧಿಹೊಂದಿದ್ದು! ”

ಜಾಹಿರಾತು

ಇರಬಹುದು. ಆದರೂ, ಆ ಗಡ್ಡೆಯಿಂದ ಅಷ್ಟೊಂದು ತಯಾರಿಸಲು ಸಾಧ್ಯವೆ ಎಂಬುದೇ ಅನುಮಾನ !

* * *

ಕ್ಲಬ್ಬಲ್ಲೇ ಬಹಳಹೊತ್ತು ಕಳೆದು ೧೧ ಗಂಟೆಗೆ ಮನೆಗೆ ಹಿಂತಿರುಗುತ್ತಿದ್ದ ಒಬ್ಬರನ್ನು ಆತನ ಪತ್ನಿ ಈಗ ಕ್ಲಬ್ಬಿಗೆ ಹೋಗದೆ ಮನೆಯಲ್ಲೇ ಮೂರುಹೊತ್ತೂ ಕೂತಿರುವಹಾಗೆ ಮಾಡಿದಾಳಂತೆ. ಒಂದು ದಿನ ಗಂಡ ಮನೆಗೆ ಬಂದು ಬಾಗಿಲು ತಟ್ಟಿದಾಗ, ಆಕೆ ಆತನ ಹೆಸರನ್ನು ಬಿಟ್ಟು, ಬೇರೊಬ್ಬರ ಹೆಸರು ಹೇಳಿ “ ಬನ್ನಿ ! ಬೇಗ ಬನ್ನಿ ! ಅವರು ಬರುವ ಹೊತ್ತಾಯಿತು ” ಅಂತ ಅಂದದ್ದೇ ಈ ಪರಿವರ್ತನೆಯ ಕಾರಣ !

* * *

“ ನೋಡಿ! ಆಚಾರ್ರೆ! ನರಕ ಗಿರಕ ಎಲ್ಲವೂ ಇಲ್ಲೇ, ಅಲ್ಲೇನೂ ಇಲ್ಲ, ಎಲ್ಲ ಇಲ್ಲೇ ”

“ ಹಾಗಾದ್ರೆ, ತಮಗೆ ವಿವಾಹವಾಯಿತೇನು ? ”

* * *

ಬಾಣಂತನಕ್ಕೆ ತವರುಮನೆಗೆ ಹೋಗಿದ್ದ ಸುಬ್ಬಮ್ಮನವರು ಆರುತಿಂಗಳಾದ ಮೇಲೆ ಹಿಂದಕ್ಕೆ ಬಂದರು. “ ಲಕ್ಷ್ಮಮ್ಮನವರೇ! ನಾನು ಊರಲ್ಲಿಲ್ಲದೆ ಇದ್ದಾಗ ಏನೇನು ಅನಾಹುತ, ಏನೇನು ಅನಾಚಾರ ನಡೆಯಿತು, ಹೇಳಿ ” ಅಂದರು. ಅದಕ್ಕವರು, “ ಬಿಡಿ, ಸುಬ್ಬಮ್ಮನವರೇ! ನೀವಿಲ್ಲದಿದ್ದರೆ ಈ ಊರಲ್ಲಿ ಅನಾಹುತವೂ ಇಲ್ಲ, ಅನಾಚಾರವೂ ಇಲ್ಲ ” ಅಂದರಂತೆ.

* * *

ಯಜಮಾನ :—ರೀ ! ಇಲ್ಲಿ ಬನ್ನಿ ಇಲ್ಲಿ ! ನಿಮ್ಮನ್ನು ಆರು ತಿಂಗಳಿಂದಲೂ ಒಂದು ಪ್ರಶ್ನೆ ಕೇಳಬೇಕು ಅಂತ ಇದ್ದೆ........

ಅಡಿಗೆಯವನು :—ಅದಕ್ಕೆ ಆರು ತಿಂಗಳಿಂದಲೂ ಉತ್ತರ ಇಟ್ಟುಕೊಂಡು ಕೂತಿದೇನೆ ನಾನೂ ಕೂಡ !

*　　　*　　　*

ಒಬ್ಬ :—ತಮ್ಮ ಉಪನ್ಯಾಸವಿದ್ದ ದಿನ ನಾನು—ಎಷ್ಟು ಹೊತ್ತಾದರೂ ಚಿಂತೆಯಿಲ್ಲ—ಬರುವುದಕ್ಕೆ ಪ್ರಯತ್ನಪಡುತ್ತೇನೆ.

ಅವರು :—ನಿಮ್ಮ ವಿಶ್ವಾಸ !

ಒಬ್ಬ :—ಹಾಗಲ್ಲ. ತಾವು ಉಪನ್ಯಾಸ ಕೊಡುವ ದಿನ, ಹೊತ್ತಾಗಿ ಬಂದರೂ, ಖಾಲಿ ಸೀಟುಗಳಿರುತ್ತವೆ ಎಂಬುದು ನನ್ನ ಭರವಸೆ.

——o——

"ಅಲ್ರಿ ! ಐದು ರೂಪಾಯಿಗೆ ಈ ಗಡಿಯಾರ ಮಾರುತ್ತೀರಲ್ಲಾ ! ನಿಮಗೆ ಲಾಭ ಏನೂ ಬರುವುದಿಲ್ಲವಲ್ಲಾ !"

"ಈ ಊರಿನಲ್ಲಿ ವಾಚ್ ರಿಪೇರಿ ಮಾಡುವ ಅಂಗಡಿಗಳೆಲ್ಲ ನಮಗೆ ಕಮಿಷನ್ ಕೊಡುತ್ತಾರೆ, ತಾಯಿ !"

*　　　*　　　*

ಲಾಯರು (ಸಾಕ್ಷಿಗೆ)—ನೀವು ಬಹಳ ಒಳ್ಳೆಯವರು........ಬಹಳ ಒಳ್ಳೆಯವರು........ಹೇಳಿ........ಹೇಳಿ........ಮುಂದಕ್ಕೆ !

ಸಾಕ್ಷಿ—ನಿಮ್ಮ ವಿಷಯದಲ್ಲೂ ನಾನು ಹಾಗೆಯೇ ಹೇಳುವೆ ! ಆದರೆ, ಏನು ಮಾಡುವುದು ? ಪ್ರಮಾಣ ಮಾಡಿದೇನಲ್ಲಾ........ಸತ್ಯ ಹೇಳುತ್ತೇನೆ, ಅಂತ ?

*　　　*　　　*

# "ಲೀಲಾ ಚಿಟ್ನೀಸ್ ಮುಸುಕು"

ಭಾನುವಾರ ಮಧ್ಯಾಹ್ನ ಮನೆಗೆ ಹೋಗುತ್ತೀನಿ. ಗಲಾಟೆಯೋ ಗಲಾಟೆ. ಹುಡುಗರೆಲ್ಲಾ ಬಿದ್ದು ಬಿದ್ದು ನಗುತ್ತಿದ್ದಾರೆ. ಮನೆ ಹೆಂಗಸರೆಲ್ಲಾ ಅಯ್ಯಯ್ಯೋ ಎಂದು ಪಕ್ಕ ಹಿಡಿದುಕೊಂಡು ಕೇಕೇ ಹಾಕುತ್ತಿದ್ದಾರೆ. ಇದೇನು ಬಂತಪ್ಪಾ ಎಂದು ನೋಡುತ್ತೀನಿ. ನಡುಮನೆ ಬಾಗಿಲ ಹತ್ತಿರ ನಮ್ಮ ಅಜ್ಜಿ,—ಎಪ್ಪತ್ತು ವರ್ಷದ ಮುದುಕಿ, ಕಿವಿ ಹಿಂದಿನ ಮುಸುಕಿನ ಸೆರಗನ್ನು ಒಂದು ಕೆನ್ನೆ ಮೇಲೆ ಬರುವಂತೆ ಮಾಡಿಕೊಂಡು, ಗಲ್ಲದ ಮೇಲೆ ಬೆರಳಿಟ್ಟುಕೊಂಡು ನಾಟಕದ ಟಾಬ್ಲೋ ನಿಂತ ಹಾಗೆ ನಿಂತಿದ್ದಾಳೆ.

'ಏನಜ್ಜೀ, ಸಿನೀಮಾದೋರ್ಹಾಗೆ ನೀನೂ ನಿಂತೆ, ಇದೇನು ಅವಾಂತರ' ಎಂದೆ.

ಅಯ್ಯೋ ನನ್ನ ಗೋಳು ನಿನಗೇನು ಗೊತ್ತು. ಬೆಳಿಗ್ಗೆ ಎದ್ದು ಹೊರಟು ಹೋಗುತ್ತೀ ನನ್ನ ಪಾಡು ನಾಯಿ ಪಾಡು, ಈ ಚಿಕ್ಕ ಚಿಕ್ಕ ಮಕ್ಕಳೆಲ್ಲಾ ನನ್ನನ್ನು ಸತಾಯಿಸುತ್ತವೆ.
ಇರಲಿ ಇದಕ್ಕೆ ಮದ್ದು ಮಾಡುತ್ತೀನೆ, ಎಂದು ಈ ಲೀಲಾ ಚಿಟ್ನೀಸ್ ಮುಸುಕನ್ನು ಹಾಕಿಕೊಂಡೆ, ನೋಡು ಆ ಕುಳ್ಳಿ ಮೂರು ವರ್ಷದ ಸೀತೆ, ಅವಳು ನೋಡು, ಲೀಲಾ ಚಿಟ್ನೀಸ್ ಬಳೆಯಂತೆ, ಸರ್ಕಾರದೋರು ಹಾಕೋ ಅಂತಹ ದೊಡ್ಡ ಬಳೆ ಹಾಕ್ಕೊಂಡು ಮೆರೆಯುತ್ತಿದ್ದಾಳೆ—ಎಂಟು ವರ್ಷದ ಕುನ್ನಿ ಈ ಸೋನಿನೋಡು. ಆ ಪಿಳ್ಳು ಜುಟ್ಟನ್ನೇ ಎರಡು ಜಡೆ ಹಾಕಿಕೊಂಡು ಭುಜದ ಮೇಲೊಂದು ಜಡೆ ಬಿಟ್ಟುಕೊಂಡು ಕುಣಿಯೋದನ್ನು-ವಿಮಲನ್ನ ನೋಡು, ಎರಡು ಮಕ್ಕಳ ತಾಯಿ ಹಾಗೆ ಕಾಣಿಸುತ್ತಾಳೆ. ಲಕ್ಷಣವಾದ ಕುಂಕುಮ ಇಟ್ಟುಕೋ ಬಾರದೆ. ಆ ನೀಲಿ ಕುಂಕುಮ ಇಟ್ಟುಕೊಳ್ಳುತ್ತಾಳೆ. ಲೀಲಾ ಚಿಟ್ನೀಸ್ ಕುಂಕುಮವಂತೆ ಕುಂಕುಮ ಕೆಂಪಾಗಿರಬೇಡವೇ—ನಿನ್ನ ತಂಗಿ ನೋಡು, ಸುಲೋಚನನ್ನ, ಕಿವಿಗೆರಡು ಸಂಡಿಗೆ ನೇತು ಹಾಕ್ಕೊಂಡು, ಲೀಲಾ ಚಿಟ್ನೀಸ್ ಲೋಲಕ್ಕು ಎನ್ನುತ್ತಾಳೆ, ಇವಳೇ ನಮ್ಮ ಕಾಲದವರ ಬುಗುಡಿ ಚಳತೊಂಬು ನೋಡಿ ಹಾಸ್ಯ ಮಾಡೋಳು — ಕಡೆಗೆ ವಯಸ್ಸಾದ ನಿನ್ನ ಹೆಂಡತಿ ನೋಡಪ್ಪ — ಲೀಲಾ ಚಿಟ್ನೀಸ್ ರವಿಕೆಯಂತೆ — ತೋಳೆಲ್ಲಾ ಕಡುಬಿನ ಹಾಗೆ ಉಬ್ಬಿ, ಇವಳ ತೋಳೇ ಇಷ್ಟು ದಪ್ಪವೋ ಎನ್ನುವ ಹಾಗಿದೆ.

ಮನೆಯಲ್ಲಿರುವವರೆಲ್ಲರೂ ಲೀಲಾ ಚಿಟ್ನೀಸ್ ತರಾಹಾನೇ. ಆ ಹೂವು ಮಾರೋಳು ಬಂದು, ಲೀಲಾ ಚಿಟ್ನೀಸ್ ಹೂವಿನ ದಂಡೆ ತೊಗೋಳೀಮ್ಮಾ ಅನ್ನೋದೆ

ನನಗೆ ಯಾಕೋ ಬೇಜಾರಾಯಿತಪ್ಪ. ನನಗೆ ಬಳೆ ತೊಟ್ಟು, ನೀಲಿ

ಕುಂಕುಮ ಇಟ್ಕೊ, ಕಡುಬಿನ ರವಿಕೆ ಹಾಕಿ, ಸಂಡಿಗೆ ಕಿವಿಗೆ ಜೋತು ಬೀಳಿಸುವ ಯೋಗ ಹೋಗಿ ಇಪ್ಪತ್ತು ವರ್ಷ ಆಯಿತು. ಈಗ ಯಾಕೆ ಅದರ ಯೋಚನೆ, ಆದರೆ ನನಗೂ ಲೀಲಾ ಚಿಟ್ನೀಸಿಗೂ ಒಂದು ಸಾಮಾನ್ಯ ಗುಣವಿದೆ ಮುಸುಕು. ಆದನ್ನೇ ಲೀಲಾ ಚಿಟ್ನೀಸಿನ ಹಾಗೆ ಹಾಕಿ ಕೊಳ್ಳುತ್ತೇನೆ. ಆಗ ನೀವೇನು ಮಾಡುತ್ತೀರಿ, ಎಂದು ಈ ಹುಡುಗರೆದುರಿಗೆ ಇವತ್ತು ಹಾಕಿಕೊಂಡೆ. ಮಠಾಧಿಪತಿಗಳ ಹಾಗೆ ಕಿವಿ ಹಿಂದೆ ಅಂಚನ್ನೂ ನೂಕಿದರೇನು, ಜೋತು ಬಿದ್ದ ಕೆನ್ನೆಯನ್ನೂ ಮುಸುಕಿನ ಅಂಚಿನಿಂದ ಅರೆ ಮುಚ್ಚಿದರೇನು ಎಂದು ಹೀಗೆ ಹಾಕಿಕೊಂಡರೆ, ನೋಡು ಮನೆಯೋರೆಲ್ಲಾ ಬಿದ್ದು ಬಿದ್ದು ನಗುತ್ತಾರೆ.

ಯಾಕೋ, ನೀನೂ ನಗುತ್ತಿ, ಹೋಗಲಿ ಕೂತುಕೊಂಡು ನಗು, ನಿಂತಿದ್ದರೆ ಬೀಳೋ ಹಾಗೆ ಆಡುತ್ತೀಯಲ್ಲೋ ಕೂತುಕೋ! ಕೂತುಕೋ !!"

---




"ಸ್ವಾಮಿ, ಹೀಗೇ ಇನ್ನೂ ಸ್ವಲ್ಪ ದಿನ ನಡೆದ್ರೆ ಎಲ್ರೂ ಹುಲ್ಲು, ಕಸಾ, ಕಡ್ಡಿ ತಿನ್ಬೇಕಾಗ್ಬರುತ್ತೆ ನೋಡಿ."

# ಪತ್ರ ವ್ಯವಹಾರ

" ಕೊರವಂಜಿ " ಯ ಪ್ರಿಯ ಸಂಪಾದಕರೇ !

ಕಣಿ ಹೇಳಿ ಹೊಟ್ಟೆ ಹೊರೆದುಕೊಳ್ಳುವ ಕೊರವಂಜಿಯರಲ್ಲೊಬ್ಬಳು ನಾನು. ಆದರೆ ಪ್ರಗತಿಪರವಾಗಿ ಈಗಿನ ಕಾಲಕ್ಕೆ ತಕ್ಕಂತೆ ಅದನ್ನು ಸರಿಪಡಿಸಿಕೊಂಡಿದ್ದೇನೆ. ಎಲ್ಲಾ ಕಸಬುಗಳಿಗೂ ಉಪಯುಕ್ತ ಸಲಹೆಗಳನ್ನೀವ ವಾರ, ಪಕ್ಷ ಅಥವಾ ಮಾಸಪತ್ರಿಕೆಗಳು ಹೇರಳವಾಗಿದ್ದರೂ, ಈ ನಮ್ಮ ಕಸಬಿಗೆ ಸಂಬಂಧಪಟ್ಟ ಪತ್ರಿಕೆಗಳು ಯಾವುದೂ ಇಲ್ಲದೆ ಇಷ್ಟುದಿನವೂ ಅತ್ಯಂತ ಕೊರತೆಯಿಂದಿದ್ದೆವು. ಈಗ ನಮ್ಮ ಬೀರೇದೇವರೇ ಮನಸ್ಸುಮಾಡಿ ಒಂದೂವರೆ ವರ್ಷಗಳಿಂದಲೂ " ಕೊರವಂಜಿ " ಪತ್ರಿಕೆಯನ್ನು ನಿಮ್ಮ ಮೂಲಕ ಪ್ರಕಟಿಸುತ್ತಲಿದ್ದಾನೆ. ಅವನಿಗೆ ಅದಕ್ಕಾಗಿ ಅನಂತಾನಂತ ವಂದನೆಗಳು ! ತಮಗೂ ಸಹ ! ವ್ಯಾಪಾರಸ್ಥರು ವಾಣಿಜ್ಯ ಪತ್ರಿಕೆಗಳನ್ನೂ, ಇಂಜಿನಿಯರುಗಳು ' ಸಿಮೆಂಟ್ ' ಪತ್ರಿಕೆಯನ್ನೂ, ಡಾಕ್ಟರುಗಳು ಕಂಪೆನಿ ಔಷಧಗಳ ಜಾಹಿರಾತು ಪತ್ರಿಕೆಗಳನ್ನೂ, ಪುಗಸಟ್ಟೆ ಪ್ರಯಾಣಮಾಡುವವರು ರೈಲ್ವೆ ಟೈಂಟೇಬಲನ್ನು ಓದುವಂತೆ ಪ್ರತಿ ಮಾಸವೂ ತಮ್ಮ ಪತ್ರಿಕೆಯನ್ನು ಕಲಾಭಿಮಾನಿಗಳಾದ ನಾವು ಒಂದು ಪಂಕ್ತಿಯನ್ನೂ ಬಿಡದೆ ಪಾಠಮಾಡುತ್ತೇವೆ.

ಪ್ರಸ್ತುತದಲ್ಲಿ, ಕಿರಿಯ ತಂಗಿಯರೋರ್ವಳು ತಮ್ಮ ಕಳೆದ ಸಂಚಿಕೆಯಲ್ಲಿ ಹೇಳಿರುವ ಒಂದು ಮಾತಿನ ಸತ್ಯತೆಯನ್ನು ಸಮರ್ಥಿಸಲು ಈ ಪತ್ರ ಬರೆದಿರುತ್ತೇವೆ. ಶ್ರೀಮತಿ ರುದ್ರಮ್ಮನವರು " ಕೊರವಂಜಿಯ ಹತ್ತಿರ ಹೆಣ್ಣುಮಕ್ಕಳು ತಮ್ಮ ಪ್ರಿಯರ ವರ್ಣನೆ ಮಾಡುವುದರಲ್ಲಿ ಒಂದು ಔನ್ನತ್ಯವೂ ಉಂಟು ಎಂದು ಹೇಳಿರುವ ಮಾತು ದಿಟವೆಂದು ನಮ್ಮ ಅನುಭವದಿಂದ ಹೇಳಬಯಸುತ್ತೇವೆ. ಅನೇಕಾನೇಕ ಹೆಣ್ಣುಮಕ್ಕಳು ಆರೀತಿ ತಮ್ಮ ಮನಸ್ಸನ್ನು ನಮ್ಮ ಮುಂದೆ ಬಿಚ್ಚಿಟ್ಟಿದ್ದಾರೆ. ಈ ಮೂಕ (?) ಸ್ತ್ರೀವೃಂದಕ್ಕೆ ಕೊರವಂಜಿಯರಾದ ನಾವೂ ನೀವೂ ನಾಲಿಗೆ ನೀಡುವುದು ನ್ಯಾಯವಾಗಿಯೇ ಇದೆ. ಆದರೆ ತಂಗಿ ರುದ್ರಮ್ಮನು ಇನ್ನೂ ಬಹಳ ಎಳೆಯವಳೋ ಅಥವಾ ಪುರಾತನ ಕಾಲದವಳೋ ಇದ್ದಂತಿದೆ. ಆಕೆಯ ಮನದ ಸೊಗವೂ, ಚೆಲುವೂ, ನಲವೂ ಇತ್ಯಾದಿಗಳು ಈಗಿನಕಾಲಕ್ಕೆ ತುಂಬಾ ಹಿಂದಿನದಾಗಿವೆ ಎಂದು ಹೇಳದೆ ವಿಧಿಯಿಲ್ಲ.

ಕೇವಲ ಆಧುನಿಕ, ಸುಶಿಕ್ಷಿತ ನವಯುವತಿಯರನೇಕರಲ್ಲಿ ಅತ್ಯಂತ ಬಳಕೆಯಿಂದಿರುವ ನಾವು ನಮ್ಮ ಅನುಭವದಿಂದ ಹೇಳಬೇಕಾದರೆ ಅವರಿಗೂ ಶ್ರೀಮತಿ ರುದ್ರಮ್ಮನವರಿಗೂ ಅಜಗಜಾಂತರವಿದೆ. ಹಾಗೆಯೇ ಯೋಚಿಸಿ ನೋಡಿದರೆ, ಎಲ್ಲರ ವಿಷಯದಲ್ಲಿ ರುದ್ರಮ್ಮನ ಆಸೆಯು ಪುರುಷರಿಗೆ ಸ್ತ್ರೀಯರ ಬಗ್ಗೆ ಇರುವ

ಆಸೆಗಳಂತಿವೆಯೇ ಹೊರತು, ವಾಸ್ತವ್ಯವಾಗಿ ಆಧುನಿಕ ಹೆಣ್ಣಗಳು ಬಯಸುವ ಬಯಕೆಗಳಂತೆ ಇಲ್ಲವೇಇಲ್ಲ. ಆಕೆಯ ಹೆಸರನ್ನು ನೋಡದೆ ಬರೀ ಪದ್ಯವನ್ನೇ ಓದಿದರೆ ಬರೆದವರು ಪ್ರಚ್ಛನ್ನ ಪುರುಷರೇ ಅಥವಾ ಸೀರೆಯುಟ್ಟ ಸ್ತ್ರೀಯೇ ಎಂಬ ಪ್ರಬಲವಾದ ಸಂಶಯವುಂಟಾಗುವುದು ಖಂಡಿತ. ಅನುಭವಸ್ಥ ಕೊರವಂಜಿಯರಾದ ನಮಗಂತೂ ಹಾಗಿದೆ :

—ಈ ಕಾಲದ ಹುಡುಗಿಯರು ನಿತ್ಯಜೀವನದ ನಿಜವನ್ನರಿತ ನಲ್ಲೆಯರು. ತಮ್ಮ ಪ್ರಿಯರಲ್ಲಿ ಬೇಕಾದ ಅಂಶಗಳೇನೆಂಬುದನ್ನು ಚೆನ್ನಾಗಿಯೂ ತಿಳಿದವರು. ಮತ್ತು ಆ ವಿಷಯಗಳಲ್ಲಿ ಇಲ್ಲದಸಲ್ಲದ ಮನಮೋಹಕ ಸ್ವಪ್ನಾಭಿಪ್ರಾಯಗಳನ್ನು ಖಂಡಿತವಾಗಿಯೂ ಇಟ್ಟುಕೊಂಡವರಲ್ಲ ಫ್ರಾಯ್ಡ್ (Freud), ಹಾವ್ಲಾಕ್ ಎಲ್ಲಿಸ್ (Havelock Valies) ಡಿ.ಹೆಚ್.ಲಾರೆನ್ಸ್ (D. H. Lawrence) ಗಳನ್ನೋದುವ ಈಗಿನ ಹುಡುಗಿಯರು ಕೇವಲ ಜುಟ್ಟು, ಷರ್ಟು, ಟೈಪಿನ್, ಬ್ರಿಲಿಯಂಟೈನುಗಳಿಂದ ಮೋಸಹೋಗುವ ಕಾಲವು ಕಳೆದುಹೋಯಿತು. ಅವೆಲ್ಲಾ ಕ್ಷಣಿಕಗಳಾದವು. ಹನ್ನೆರಡು ವರ್ಷಕ್ಕೆ ಕಣ್ಣು ಕಾಣದಿ ಬಂದು ಮೂವತ್ತು ವರ್ಷಕ್ಕೆ ತಲೆ ನರೆಯುವ ಈ ಕಾಲದಲ್ಲಿ ಬಾಹ್ಯಾಲಂಕಾರಗಳು ವ್ಯರ್ಥ ಎಂದು ತಿಳಿದು, ಪ್ರಿಯರಲ್ಲಿ ಅಪ್ಪಟ ಭಂಗಾರದಂಥ ಗುಣಗಳನ್ನು ಬಯಸುತ್ತಾರೆಯೇ ಹೊರತು, ಬರೀ ಮೆರುಗಿನಿಂದ ಮೋಸಹೋಗುವ ಮಡ್ಡಿಗಳಲ್ಲ !

ಆದುದರಿಂದಲೇ ಶ್ರೀ. ರುದ್ರಮ್ಮನವರ ಕವನವನ್ನು ನೋಡಿ ಆಧುನಿಕ ಹೆಣ್ಣುಗಳು ಅವಮಾನಿತರಾಗಿ ಕೋಪಗೊಳ್ಳುವುದು ಸಹಜವಾಗಿಯೇ ಇದೆ. ಇದಕ್ಕೆ ಮುನ್ನವೇ ಶ್ರೀ. ರುದ್ರಮ್ಮನವರ ಅವಗಾಹನೆಗಾಗಿಯೂ, ತಮ್ಮ ಇತರ ಓದುಗರ ತಿಳುವಳಿಕೆಗಾಗಿಯೂ, ಶ್ರೀ. ರುದ್ರಮ್ಮನವರ ಕವನದ ಆಧಾರದಮೇಲೆಯೇ ನಮ್ಮಲ್ಲೊಬ್ಬರು ರಚಿಸಿರುವ ಪದ್ಯವೊಂದನ್ನು ಸತ್ಯಾಂಶವನ್ನು ಹೊರಗೆಡುವುದಕ್ಕೂ ನಮ್ಮ ಪ್ರೀತಿಯ ನವೀನ ಹೆಣ್ಣುಮಕ್ಕಳ ಸಮರ್ಥನೆಗೋಸುಗವೂ ಪ್ರಕಟನೆಗೆ ಕಳುಹಿಸಿದ್ದೇವೆ. ರುದ್ರಮ್ಮನವರ ಕವಿತೆಯನ್ನೋದಿದವರು ಮತ್ತೆ ಇದನ್ನು ಓದಲೇಬೇಕು !

ಸುವ್ವೀ, ಸುವ್ವೀ, ಸುವ್ವಾಲೆ ಸುವ್ವೀ !—
ಗಿಷ್ಟು ಬೀರೇದೇವರ ಆಣೆ, ಸುವ್ವೀ—
ಮಾಯಮ್ಮ ಮಾರಮ್ಮ, ಊರಮ್ಮ, ಬೀರಮ್ಮ,
ಪ್ಯಾಟೆ ಈ "ಸ್ವರದೇವರ" ಆಣೆ ಸುವ್ವೀ—
ಕೋಟಿ ಹನುಮಪ್ಪನ ಕಟ್ಟಾಣೆ ಸುವ್ವೀ—
ಪೇಳುವೆ ಕಣಿಯನ್ನು ಕೊರವಂಜಿ ನಾನು
—ಸಟೆಯಲ್ಲ, ಸಟೆಯಲ್ಲ, ಸಟೆಯಲ್ಲ, ಸುವ್ವೀ !
—ಸುವ್ವೀ, ಸುವ್ವೀ, ಸುವ್ವಾಲೆ ಸುವ್ವೀ........

ಇತಿ

ಕೊರವಂಜಿಯರ ಬೀರಮ್ಮ.

# ಸಿರಿ ಅಥವಾ ಆಧುನಿಕ ಹೆಣ್ಣಿನ ಹೆಬ್ಬಯಕೆ

---

ಮುಂದುಗಡೆ ಹಾರುವಾ ಮುಂಕರ್ಲ್ ಕ್ರಾಪಿರಲಿ,
ಹಿಂದುಗಡೆ ದುಂಡಾಗಿ ತಿರುವಿ ಕಟ್ಟಿದ ಗಂಟಿ ಇರಲಿ,
ಸೆಂಟಿರಲಿ, ಬ್ರಿಲಿಯಂಟಿರಲಿ, ತಂಪಿನಾ ಕೊಬ್ಬರಿಯ
ಎಣ್ಣೆಯೇ ಇರಲಿ, ಎಮಗೆ ಬ್ಯಾಂಕಿನಲಿ ಗಂಟಿದ್ದರೇ,
ಅದುವೆ ಸಿಂಗರವೆಮ್ಮ ಮನಕೆ ಚಲುವು.

ಕ್ಲೋಸಾಗಿ ಸಮವಾಗಿ ಕತ್ತರಿಸಿ ಇರಲೀ,
ನುಣುಪಾಗಿ ಸಾಣೆಯಿಕ್ಕಿದ ನುಂಡೆಯೇ ಇರಲಿ,
ಸಮಯದಲಿ ಪಿಡಿದು ಬುದ್ಧಿ ಪೇಳಲು ಸಿಗುವ
ಕಾಸಗಲ ಶಿಖೆಯೇ ಉತ್ತಮೋತ್ತಮ, ತಂಗಿ!,
ಅದುವೆ ಸಿಂಗರವೆಮ್ಮ ಮನಕೆ ಹಿತವು.

ವಸನಕ್ಕೆ ಮಿತಿಯೇನು, ವಸನವಿಲ್ಲದೊಡೇನು,
—ಅಹಲ್ಯೆ, ಅನುಸೂಯೆಯರು ಒಲವಿಂದ ಒಪ್ಪಿದಾ
ಋಷಿಗಳೆಲ್ಲರು ತಾವು ಜಲ್ಲೆಗಡ್ಡಯುತರಲ್ಲವೇ!—
ಚಲುವು ಕೇಶದೊಳಿಲ್ಲ, ಅವನಾಳ್ವ ಸೇವೆಯೊಳು!
—ಅದುವೆ ಸಿಂಗರವೆಮ್ಮ ಮನಕೆ ನಲವು.

ಕ್ರಿಕೆಟ್ಟು, ಟೆನ್ನಿಸು, ಚೆಂಡಾಟ, ಅವು ಬರಿಯ ಪುಂಡಾಟ,
ಬಿಳಿಯ ಪ್ಯಾಂಟ್ಸಾದರೇನು, ಮಸಿಯ ಪಂಚೆಯಲೇನು,—
ನೀಕ್ಸೇದಿ, ಬಟ್ಟೆಗಳೊಗೆದು, ಮಗುವೆತ್ತಿ ಮುದ್ದಾಡಿ,
ಮನೆಗೆಲಸ ನಲವಿಂದ ನೋಡುವನೆ—ನಲ್ಲ ತಂಗಿ!,
ಅದುವೆ ಸಿಂಗರವೆಮ್ಮ ಮನಕೆ ಸೊಗಸು.

ಕತ್ತಲಾಗುವ ಮುನ್ನ ತಾ ಸೇರಿ ಮನೆಗೆ
ಮನೆಯೆಲ್ಲ ಕ್ಲೀನಾಗಿ ಗುಡಿಸಿ, ಹಾಸಿಗೆಗಳ
ಪಂಕ್ತಿಯಿಂ ಸಾಲಾಗಿ ಹಾಸಿಟ್ಟು, ನಾವ್ಬರುವ
ವೇಳೆಯನೆ ಕಾದಿರ್ದು ಬಿಸಿನೀರು ಎಸಗುವುದು
ಅದುವೆ ಸಿಂಗರವೆಮ್ಮ ಸರ್ವಸಿರಿಯು.

ಚಾಕರಿಯು ನೆಪದಲ್ಲಿ ಪರದೇಶಕ್ಕೋಗಲೀ,
ದಂಡಿನೊಡೆ ಕೆಲಸಕ್ಕೆ ಊರೂರ ತಿರುಗಲೀ,
ಮಾಸ ಮಾಸಕೆ ಸಂಬಳವ ನಮಗೆಂದು ತೆಗೆದಿಟ್ಟು
ಮಿಾಸಲನೆ ಮೊದಲ ದಿವಸವೆ ಕಳುಹುವುದು,
ಅದುವೆ ಸಿಂಗರವೆಮ್ಮ ಸುಖಕೆ ಸುಗ್ಗಿ.

ಆ ಬ್ಯಾಂಕಿನಾ ಬ್ಯಾಲೆನ್ಸೆ, ಸೇವೆಯ ಸೊಗಸೆ,
ಮಾತಿಲ್ಲದಾ ಮನೆಗೆಲಸ, ಕಳುಹಿಪಾ ಮನಿಯಾರ್ಡರ್,
ಅವನ ಬಾಳೆಮ್ಮ ಬಾಳ್ ನಗೆಗೂಡಿ ಸಾಗಿಬರೆ,
ನಮ್ಮ ಸಂಕಟವೆಲ್ಲ ಧೂಳಾಗಿ ಹಾರುತಿರೆ,
ಎಮ್ಮ ಗರತಿಯರ ಭಾರ ಹೊರೆ ಹರಿವುದು!

—ಕೊ. ಬೀ.

[ ಲೇಖಕರ ಅಭಿಪ್ರಾಯಗಳಿಗೆ ನಾವು ಜವಾಬ್ದಾರರಲ್ಲ. ]

—ಸಂ.

---



"......ನಾನ್ಹೇಳಿದ್ದೆ, ಸಾಯಂಕಾಲದೊಳಗೆ ಕೊಡ್ದಿದ್ರೆ ನಿನಗೆ ಕೊಡ್ಬೇಕಾದ ದುಡ್ಡು ಕೊಡೋಲ್ಲ, ಅಂತ.......ಅದೇ ಕೊಡ್ಬಿಟ್ಟಿದ್ದಾನೆ....!!!"

# "ಮಣಿ, ಕಸೂತಿ ಪಟ" ಶಾಸ್ತ್ರ

———o———

ಮನೆಯೊಳಗೆ ಹೋಗುತ್ತಲೇ ಒಂದು ಪಟ. ಹಿತ್ತಾಳೆ ತಟ್ಟೆಯಂತಹ ಕಟ್ಟು. ಮಣಿಗಳಿಂದ ರಚಿಸಲ್ಪಟ್ಟ ಒಂದು ನಾಲ್ಕುಕಾಲಿನ ಪ್ರಾಣಿ. ಅದರ ಕೆಳಗಡೆ ಮಣಿಗಳಿಂದಲೇ ಬರೆಯಲ್ಪಟ್ಟ "Horse, Thangamma" ಎಂಬ ಶಾಸನಲಿಪಿ. ನನಗೆ ಕುತೂಹಲ. ಈ ಕುದುರೆಮುಖಿ ಬಾಬಾಬುಡನ್‌ಗಿರಿಯ ತಂಗಮ್ಮನನ್ನು ನೋಡಿಯೇಬಿಡಬೇಕು ಎಂದು. ನಾನು ಮನೆಯೊಳಕ್ಕೆ ಹೋಗಿದ್ದುದು, ಮನೆಯನ್ನು ಕೊಳ್ಳುವ ಉದ್ದೇಶದಿಂದ. ಮನೆಯ ಯಜಮಾನನು ನನ್ನನ್ನು ಕರೆದುಕೊಂಡು ಹೋಗುತ್ತಿದ್ದನು. ಅವನನ್ನು ಹೇಗೆ ಕೇಳುವುದು? "ಏನು ಸ್ವಾಮಿ, ನಿಮ್ಮಾಕೆಯು ಕುದುರೆಮುಖಿಯೇ, ನಿಮ್ಮ ಮಗಳೇ, ಅಥವಾ ನಿಮ್ಮ ತಾಯಿಯೇ?" ಇರಲಿ ಮನೆ ನೋಡುವ ನೆಪದಲ್ಲಿ ಈ ಸಮಸ್ಯೆಯೂ ಪರಿಹಾರವಾಗುತ್ತದೆಯೋ ಎಂದುಕೊಂಡು, ಮನೆ ಕೊಠಡಿಗಳನ್ನು ನೋಡುವ ನೆಪದಲ್ಲಿ ಇದ್ದವರನ್ನೂ ನೋಡಿದೆ. ಎಲ್ಲರೂ ಮನುಷ್ಯರಂತಿದ್ದರೇ ಹೊರತು, ಈ ಚಿತ್ರ ರಚಿಸಿದ ಕಳೆಯು ಯಾರಲ್ಲಿಯೂ ಕಂಡುಬರಲಿಲ್ಲ. ಈ ಸಂಸ್ಕೃತಿಯ ಮನೆ ನನಗೇಕೆ ಎಂದು, ಬೆಲೆ ಹೆಚ್ಚಾದ್ದರಿಂದ ಕೊಳ್ಳದೆ ಹಿಂತಿರುಗಿದೆ.

* *

ಇನ್ನೊಮ್ಮೆ ವರಾನ್ವೇಷಣೆಕ್ಕಾಗಿ ಒಬ್ಬ ರಾಯರ ಮನೆಗೆ ಹೋಗಿದ್ದೆ. ವರಾಂಡದಲ್ಲಿಯೇ ಒಂದು ಕಸೂತಿ ಕೆಲಸದ ನಾಯಿಯ ಪಠ. ಅಂದಚೆಂದದ ಮಜಭೂತಾದ ಕಟ್ಟು—ಸುಲಕ್ಷಣವಾದ ನಾಯಿ. ಮೇಲ್ಗಡೆ ಶಿರೋನಾಮೆ. ಲಲಿತ. ಈ ಪಠದ ಕೆಳಗಡೆ ಒಂದು ಕಂದಿದ ಬಾಡಿದ ಹಳೆಯ ಭಾವಚಿತ್ರ. ನಾಯಿನ ಚಿತ್ರದ ಎಂಟನೇ ಒಂದುಭಾಗ. ಹಳೆತರಹ ಚೌಕಟ್ಟು. ಮೂಲೆಯಲ್ಲಿ ಕಣಜದ ಗೂಡು. ಹಿಂದುಗಡೆ ಜೇಡನ ಪರೆ. ಹಾಗೆಯೇ ಯೋಚಿಸಿದೆ. ಮನೆಯಾಕೆಯು ಇಲ್ಲಿ ಯಜಮಾನಿ. ತಾನು ಕನ್ಯಾವಸ್ಥೆಯಲ್ಲಿ ಕೆತ್ತಿದ ನಾಯಿಗೇ ಪ್ರಾಧಾನ್ಯ ಕೊಟ್ಟು, ಮದುವೆಯಾದ ಗಂಡನನ್ನೂ ಒಂದು ಮೂಲೆಯಲ್ಲಿ ಚಿಕ್ಕದಾಗಿ ನೇತುಹಾಕಿದ್ದಾಳೆ. ಅಂದಮೇಲೆ ಈ ತರನಾದ ಬುದ್ಧಿಯೇ ಮಗನಿಗೂ ಬಂದಿರಬೇಕು. ವಸ್ತುಗಳ ತಾರತಮ್ಯ ಬೆಲೆಯೇ ಇವರುಗಳಿಗೆ ತಿಳಿಯುವುದಿಲ್ಲ ಅಥವಾ ತಂದೆಯನ್ನು ಹೋತುಕೊಂಡರೆ, ಚಿಕ್ಕ ಪಠದ ಗತಿ. ಇಂತಹವನಿಗೆ ನನ್ನ ಮಗಳನ್ನು ಕೊಡುವುದೇ, ಛೇ, ಛೇ,—

ಅವರ ಹತ್ತಿರ ಜಾತಕವನ್ನು ತಂದು, ಸರಿಯಾಗಲಿಲ್ಲವೆಂದು ನಾನೇ ಒಂದು ಪತ್ರ ಬರೆದೆ.

* *

ನೋಡಿ, ಒಬ್ಬರ ಗುಣ ಮನೋವೃತ್ತಿ, ಸಂಸ್ಕೃತಿ, ಭೂತಭವಿಷ್ಯಗಳನ್ನೆಲ್ಲಾ ನಾಡಿ ಗ್ರಂಥದಿಂದ, ಕೈನೋಡುವುದರಿಂದ, ಹಣೆಯ ರೇಖೆಗಳಿಂದ, ಪ್ರಶ್ನೆ ಕೇಳಿದ ಹೊತ್ತಿನಿಂದ ಹೇಳಬಹುದಂತೆ. ಆದರೆ ಅವರ ಮನೆಯಲ್ಲಿರುವ ಈ ತೆರನಾದ ಮಣೆಪಟಗಳಿಂದ, ಕಸೂತಿ ಚಿತ್ರಗಳಿಂದ ಇನ್ನೂ ಸುಲಭವಾಗಿ ತಿಳಿಯುವ ಶಾಸ್ತ್ರವನ್ನು ಯಾರೂ ಚೆನ್ನಾಗಿ ಅಭ್ಯಾಸ ಮಾಡಿಲ್ಲ. ಈ ನನ್ನ ಅನುಭವಕ್ಕೆ ಶಾಸ್ತ್ರ ಸಮ್ಮತಿಯಿದೆಯೇ, ಇದಕ್ಕೆ ನಮ್ಮ ಪೂರ್ವಿಕರು ಶ್ಲೋಕಗಳನ್ನು ಮಾಡಿಲ್ಲವೇ ಎಂಬ ಶಂಕೆಯು ತಲೆದೋರಿದಾಗ ನಾನು ವೇದಾಧ್ಯಯನಕ್ಕೆ ಆರಂಭಿಸಿ, ಅಥರ್ವಣವೇದದ ಮೂರನೆಯ ಖಂಡದಲ್ಲಿ ಈ ಬಿಂಬಶಾಸ್ತ್ರದ ತಿರುಳನ್ನು ಕಂಡೆ. ಈ ಖಂಡದ ಒಂದು ಹಾಳೆಯೇ ಸಿಕ್ಕಿದೆ. ಮಿಕ್ಕಿದುದನ್ನೆಲ್ಲಾ ಜಪಾನಿಯರು ವರ್ಷಾಂತರಗಳ ಹಿಂದೆಯೇ ತೆಗೆದುಕೊಂಡು ಹೋಗಿ ಜರ್ಮನರಿಗೆ ಮಾರಿದರಂತೆ. ಹಾಗಾಗಿ ನಾನು ಈ ಶಾಸ್ತ್ರದ ತರ್ಜುಮೆಯನ್ನು ನಿಮಗೆ ಕೊಡಲಾರೆ. ಆದರೂ ನೀವುಗಳು ಎಂದಾದರೂ ಎಲ್ಲಾದರೂ ಹೋದಾಗ ಚಿತ್ರಪಟಗಳನ್ನು ನೋಡಿ ಮನೆಯವರ ಗುಣಾವಗುಣಗಳನ್ನು ಮನಸ್ಸಿನಲ್ಲಿಯೇ ಲೆಕ್ಕಮಾಡಿ ನೋಡಿ. ಅವರುಗಳ ಪರಿಚಯದಿಂದ ಇದನ್ನು ವಿಮರ್ಶಿಸಿ. ನಿಮಗೆ ಇದರ ಸ್ವಾರಸ್ಯ ತಿಳಿಯುತ್ತೆ.

*　　　　*

[ಈ ಕಾರಣಕ್ಕಾಗಿಯೇ ನಾವು ನಮ್ಮ ಲೇಖಕರ ಮಣೆಪಟಗಳನ್ನಾಗಲಿ ಚಿತ್ತಾರದ ಚಿತ್ರಗಳನ್ನಾಗಲಿ ಪ್ರಕಟಿಸದೆ ಇರುವುದು. ಸಂ.]

—o—

ಆತ—ನಮ್ಮ ಪುಟ್ಟು ವಿಷಯದಲ್ಲಿ ನೀವೇನೂ ಯೋಚನೆ ಮಾಡಬೇಡಿ. ಅನುರೂಪನಾದ ವರ ಸಿಗುವತನಕ ಕಾದಿರೋಣ.

ಆಕೆ—ಯಾಕೆ? ಚೆನ್ನಾಗಿ ಹೇಳಿದಿರಿ! ನಮ್ಮ ತಂದೆತಾಯಿಗಳು ಹೀಗೆ ಎಂದೂ ಹೇಳಿಲ್ಲ, ನನಗೆ!

*　　　*　　　*

ಆಕೆ—ಡಾಕ್ಟರೇ! ಪೂರಾ ಸುಸ್ತು ......ಸಂಕಟ........ಕೂತರೆ ಆಯಾಸ........ ನಿಂತರೆ ಆಯಾಸ.......

ಡಾಕ್ಟರ್—ಎಲ್ಲಿ ಅಮ್ಮ! ನಿಮ್ಮ ನಾಲಿಗೆ ತೋರಿಸಿ........!

# ರೈಲಿಗಾಗಿ ಓಡುವುದು

ನಮ್ಮ ಮನೆ ಇರುವುದು ಒಂದು ರೈಲು ಸ್ಟೇಷನ್ ಎದರು. ಸ್ಟೇಷನ್ ಚಿಕ್ಕದಾದರೂ ರೈಲು ನಿಲ್ಲುತ್ತೆ; ಮುಂದಕ್ಕೆ ಹೋಗುತ್ತೆ! ನೀರಿನ ಪ್ರವ್ಯಾಸವೇನೂ ಇಲ್ಲ. ಒಂದೂವರೆ ನಿಮಿಷ, ತಪ್ಪಿದರೆ, ಎರಡು ನಿಮಿಷ, ಅಷ್ಟೆ. ಬಂದಾಗ ಒಂದು ಸಿಳ್ಳು, ಹೊರಟಾಗ ಇನ್ನೊಂದು ಬೆಳಗಿನ ಗಾಡಿ ೭-೫೬ಕ್ಕೆ ಬರುತ್ತೆ, ಈ ಕಡೆಯುದು; ಸಂಜೆ ಗಾಡಿ ೫-೪೩ಕ್ಕೆ ಬರುತ್ತೆ, ಆ ಕಡೆಯುದು.

ನಮ್ಮ ಊರು ಚಿಕ್ಕದಾದರೂ, ಸುತ್ತ ಮುತ್ತ ಹತ್ತಾರು ಹಳ್ಳಿಗಳಿಂದ ಈ ಎರಡು ರೈಲುಗಳಿಗಾಗಿ ಓಡೋಡಿ ಬರುವ ಜನ ಜಾಸ್ತಿ. ಹಾಗೆ ಬರುವವರೆಲ್ಲರೂ ನಮ್ಮ ಮನೆ ಎಡಭಾಗದಿಂದ ಸ್ಟೇಷನಿಗೆ ಹೋಗುವ ರಸ್ತೆ ಮೇಲೆಯೇ ಓಡಬೇಕು. ಡ ಎಂಬ ಕನ್ನಡ ಅಕ್ಷರ ತೆಗೆದುಕೊಳ್ಳಿ. ಮಧ್ಯದ ಪೊಳ್ಳಲ್ಲೇ ನಮ್ಮ ಮನೆ. ಅದರ ಎಡಗಡೆ ಮೇಲಿನ ತಲೆಕೊಟ್ಟಿನತನಕ ಹೋಗುವ ಗೆರೆಯೇ ರಸ್ತೆ. ತಲೆಕೊಟ್ಟೇ ಸ್ಟೇಷನ್ ಪ್ಲಾಟ್‌ಫಾರಂ. ಅರ್ಥವಾಯಿತೆ? ನಮ್ಮ ಮನೆ ವರಾಂಡದಲ್ಲಿ ನಿಂತುಕೊಂಡರೆ, ತಲೆಕೊಟ್ಟೆಲ್ಲ ಕಾಣುತ್ತೆ. ವರಾಂಡಾದ ಎಡಭಾಗದ ಕೊಠಡಿಗೆ ನುಗ್ಗಿ ಕಿಟಕಿ ತೆಗೆದು ನೋಡಿದರೆ ಉದ್ದಕ್ಕೂ ರಸ್ತೆ ಮೇಲೆ ಓಡಾಡುವ ಜನ ಕಾಣುತ್ತಾರೆ.

ಇಷ್ಟೆಲ್ಲ ವಿವರಣೆ ಏಕೆ ಕೊಟ್ಟೆ ಅಂದರೆ....ಬನ್ನಿ, ನಮ್ಮ ಮನೆಗೆ ಒಂದು ದಿವಸ. ತೋರಿಸುತ್ತೇನೆ ನಿಮಗೆ. ಬೆಳಿಗ್ಗೆ ೭-೩೦ಕ್ಕೆ ಬಂದುಬಿಡಿ. ಆ ರಸ್ತೆ ಮೇಲಿಂದ ಸ್ಟೇಷನಿಗೆ ಓಡುವ ಜನರನ್ನು ನೋಡೋಣ. ಕೊಂಕುಳಲ್ಲಿ ಮಗು, ತಲೆ ಮೇಲೆ ಕುಕ್ಕೆ ಸಹಿತವಾಗಿ ಎಷ್ಟು ವೇಗವಾಗಿ ಓಡಬಲ್ಲಿರಿ ನೀವು? ಗಂಟೆಗೆ ೧೦ ಮೈಲಿ? ಸಾಧ್ಯವಿಲ್ಲವೆ?....ನೋಡಿ, ಆಕೆಯನ್ನ.... ನಾನು ಅಳತೆ ಮಾಡಿದ್ದೇನೆ. ಆ ಹುಣಿಸೆಮರದಿಂದ ಸ್ಟೇಷನ್ ಸ್ಲೀಪರ್ ಬೇಲಿ ತುದಿತನಕ ಸರಿಯಾಗಿ ಒಂದು ಫರ್ಲಾಂಗು; ಅಂದರೆ ಎಂಟನೆಯ ಒಂದು ಮೈಲಿ. ತಕೊಳ್ಳಿ, ಗಡಿಯಾರ ಅಕೊ! ಹುಣಿಸೆಮರದ ಹತ್ತಿರಕ್ಕೆ ಬಂದಳಲ್ಲ....ಸಣ್ಣ ಮುಳ್ಳು....ಸೆಕೆಂಡಿನ ೮-೪೦ರಲ್ಲಿದೆಯೋ? ....ಬೇ ಲಿ ಗೆ ಬಂದಳು. ಈಗೆಷ್ಟು? ೫೫. ನೋಡಿದರಾ? ಲೆಕ್ಕಹಾಕಿ. ೧೫ ಸೆಕೆಂಡಿನಲ್ಲಿ ಒಂದು ಫರ್ಲಾಂಗಾದರೆ....ಎರಡು ನಿಮಿಷಕ್ಕೆ ಒಂದು ಮೈಲಿ ಗಂಟೆಗೆ ೩೦ ಮೈಲಿ ವೇಗ! ಮದ್ರಾಸಿನಿಂದ ಅರ್ಕೋಣಂವರೆಗೆ ಎಂ. ಎಸ್. ಎಂ. ಎಂಜಿನ್ ವೇಗ! ಮನುಷ್ಯ ಪ್ರಾಣಿಗೆ ಇದು ಸಾಧ್ಯ ಇದು ಅಸಾಧ್ಯ ಅಂತ ಇಲ್ಲವೇ ಇಲ್ಲ, ಸ್ವಾಮಿ! ಆಯಾ ಸನ್ನಿವೇಶ ಸಂಕಟ ಸಂತೋಷ ಇದಕ್ಕೆ ತಕ್ಕಂತೆ ನಡೆದುಕೊಳ್ಳುತ್ತಾನೆ, ಓಡಿಕೊಳ್ಳುತ್ತಾನೆ.

ಅಕೊ! ಬಂದರಲ್ಲಾ! ಇನ್ನೊಬ್ಬರು! ಯಾರೋ ಪಟೇಲರಿರಬೇಕು.... ರುಮಾಲು ಚೆನ್ನಾಗಿದೆ. ಕೈಯಲ್ಲಿ ಬುಟ್ಟಿ ಬೇರೆ. ಹೆಗಲಮೇಲೆ ಶಾಲಿದೆ. ಇವರದು ಎಷ್ಟು ವೇಗ? ಹೇಳಿ ಬೇಗ.... ೧೫ ಮೈಲಿಯೇ? ಅದಕ್ಕಿಂತ ಹೆಚ್ಚಾಗಿದ್ದರೆ, ನನಗೆ ಒಂದು ರೂಪಾಯಿ ಕೊಡುತ್ತೀರಾ?....ಆ! ಬೇಡ ಎಂಟಾಣೆ.... ಹೂಂ....ನೋಡಿ ಗಡಿಯಾರಾನ....ಹುಣಿಸೇಮರಕ್ಕೆ ಬಂದರು...೧೦.......೩೬,೩೭ ೩೮....ಸಿಕ್ಕಿತು ಬೇಲಿ....ಅಂದರೆ, ೨೮ ಸೆಕೆಂಡುಗಳು. ಅಂದರೆ ಮೈಲಿ ೧೫ಕ್ಕಿಂತ ಜಾಸ್ತಿ....ನೋಡಿ, ನಾನೊಂದು ಪಟ್ಟೀನೇ ಮಾಡಿಟ್ಟುಕೊಂಡಿದೇನೆ.... ಹುಣಿಸೇಮರದಿಂದ ಬೇಲಿತನಕ ಇಷ್ಟಿಷ್ಟು ಸೆಕಂಡಿಗೆ ವೇಗ ಇಷ್ಟಿಷ್ಟು ಮೈಲಿ ಅಂತ....ಕೊಡಿ ಎಂಟಾಣೆ........ಹೀಗೆ ನಾನು ಅನೇಕರಿಗೆ ಹುಚ್ಚು ಹಿಡಿಸಿ ಅವರೊಂದಿಗೆ ಬಾಜು ಕಟ್ಟಿ ಕಾಸು ಸಂಪಾದಿಸುತ್ತಿದೇನೆ. ಅವರಿಗೆ ನನ್ನಷ್ಟು ಅನುಭವವಿಲ್ಲ. ಮಾನವನ ಕಾಲಸ್ಥಿತಿಯ ಮೇಲೆ ನಂಬಿಕೆ ಇಲ್ಲ. ಕಾಲ, ವೇಗ, ದೂರ, ಇವುಗಳನ್ನು ಕುರಿತ ನಿರ್ದಿಷ್ಟವಾದ ಪರಿಜ್ಞಾನವಿಲ್ಲ. ಸುತ್ತ ಮುತ್ತ ಇರುವ ಹಳ್ಳಿಯವರ, ವರ್ತಕರ, ಅಧಿಕಾರಿಗಳ ರೈತರ ಓಟವನ್ನು ಅವರು ನನ್ನಂತೆ ದಿನವೂ ಪ್ರತ್ಯಕ್ಷ ನೋಡಿಲ್ಲ—ಎಂದೋ ಒಂದು ದಿನ ನನ್ನ ಬೋನೊಳಕ್ಕೆ ಬಂದು ನನ್ನೊಂದಿಗೆ ವಾದ ಹೂಡಿ ಕಾಸು ತೆತ್ತು ಮೆತ್ತಗಾಗುತ್ತಾರೆ!

ಕೆಲವರಿಗೆ ನಾನು ನನ್ನಂತೆಯೇ ಹುಚ್ಚು ಹಿಡಿಸಿದ್ದೇನೆ. ಅವರು, ಪ್ರತಿ ಭಾನುವಾರವೂ ನಮ್ಮ ಮನೆಗೆ ಬರುತ್ತಾರೆ. "ಕುದುರೆಜೂಜಿಗೆ ಯಾಕೆ ಹೋಗಬೇಕು ನಾವು? ಬಾಜಿ ಕಟ್ಟುವುದಕ್ಕೆ ಯಾವ ಪ್ರಾಣಿಯನ್ನು ಓಡಿಸಿದರೇನಂತೆ ಅದೃಷ್ಟ ಪರೀಕ್ಷೆ ಮುಖ್ಯ....ಹತ್ತು ಜನರ ಕಾಸು ನಮ್ಮ ಕಿಸೆಯೊಳಗೆ ಬೀಳುವ ಸಂಭವವಿದ್ದರಾಯಿತು....... ನೂರು ಜನರ ಕಣ್ಣೀರು ಒಬ್ಬನ ದಾಹ ಪರಿಹಾರ. ಲಾಟರಿಗಳ ಹಾಗೆ! ಪರಂಗಿಯವರೂ ಕೂಡ ನಾಯಿಗಳನ್ನೋಡಿಸಿ ಜೂಜಾಡುತ್ತಾರೆ; ಕಂಬಳಿ ಹುಳುಗಳ ಮೂಗಿಗೆ ಬೆಣ್ಣೆ ಹಚ್ಚಿ ಅವುಗಳು ತಮ್ಮ ಮೂಗನ್ನೇ ಹಿಂಬಾಲಿಸುತ್ತಿರುವಾಗ ಬಾಜಿ ಕಟ್ಟುತ್ತಾರೆ. ಕೋಳಿಗಳಾಗಲಿ ಗೂಳಿಗಳಾಗಲಿ,ಅಜವಾಗಲಿಗಜವಾಗಲಿ ಹಣೆಹಣೆ ಒಡೆದುಕೊಳ್ಳಲಿ! ನಾವು ಹಣ ಹೊಡೆಯೋಣ "ಅನ್ನುವ ಸ್ವಭಾವ ಅವರದು. "ಏನ್ರಿ! ನಿಮ್ಮ ಮನೆ ಹತ್ತಿರ ದಿನವೂ ಎರಡು ಸಾರಿ ರೇಸುಗಳಾಗುತ್ತವೆಯಂತೆ. ನಾವೂ ಸೇರಲೋ ನಿಮ್ಮ ಟರ್ಫ್ ಕ್ಲಬ್ಬಿಗೆ?" ಅಂತ ಅವರು ಕೇಳುವರು. "ಬನ್ನಿ" ಅಂತ ಅವರನ್ನೆಲ್ಲಾ ಸೇರಿಸಿದೇನೆ.

ಹುಣಿಸೇ ಮರದಿಂದ ಬೇಲಿಯವರೆಗೆ ರೈಲಿಗಾಗಿ ಓಡುವ ಜನರ ವೇಗದ ಮೇಲೆ ಜೂಜಾಡುತ್ತೇವೆ; ಅಲ್ಲದೆ, ಓಟಗಾರರಿಗೆ ರೈಲು ಸಿಗುತ್ತದೋ ಇಲ್ಲವೋ ಎಂಬುದರ ಮೇಲೂ ಬಾಜಿ ಕಟ್ಟುತ್ತೇವೆ ಅಂದರೆ, ಹೀಗೆ; ರೈಲು ಪ್ಲಾಟ್ ಫಾರಮಿಗೆ ಬಂದಮೇಲೆ, ಮೊದಲನೆಯ ಸಿಳ್ಳಾದಮೇಲೆ, ಹುಣಿಸೆಮರದ ಹತ್ತಿರದಿಂದ ಓಟ ಪ್ರಾರಂಭಿಸುವ ವ್ಯಕ್ತಿಗಳಿಗೆ

ರೈಲು ಸಿಗುವ ಸಂಭವವುಂಟೆ ಇಲ್ಲವೆ ಅಂತ ಬಾಜಿ ಕಟ್ಟುತ್ತೇನೆ. ಸಾಲ್ಕೈದು ಜನರು ಒಟ್ಟಿಗೆ ಓಡುತ್ತಿದ್ದರೆ, ಯಾರಿಗೆ ರೈಲು ಸಿಗುತ್ತದೆ, ಯಾರಿಗೆ ಸಿಗುವುದಿಲ್ಲ ಅನ್ನುವುದರ ಮೇಲೂ 1ಕ್ಕೆ 8, 1ಕ್ಕೆ 4, ಅಂತ ಪಣ ತೊಡುತ್ತೇನೆ.

ನೀವೂ ಯಾವಾಗಲಾದರೂ ಬನ್ನಿ ನಮ್ಮಮನೆಗೆ....ಸ್ಮೇಷನ್ನಿನ ಎದುರಿನ ಮನೆಯೇ ! ಹೆಚ್ಚು ಹುಡುಕಬೇಕಾಗಿಲ್ಲ. ಬಂದಾಗ, ಈ ನೂತನ ಮನರಂಜನೆ ಕ್ರಮದ ನಿಯಮಾವಳಿಯನ್ನು ನಿಮಗೆ ತೋರಿಸುತ್ತೇನೆ.

—ಪಾಟೀಲ




ಅವರೆ ಅಫೀಸರು ಸ್ವಾಮಿ, [illegible] ಹಾಕಿರೊ ಬೋರ್ಡನ್ನ ತೆಗೆದು ಒಳಕ್ಹೋಗೋದು ಅಂತ.......”

# ಕೊಂಪೆ ಅಂಗಡಿ ರೇಷನ್

---

ಸಾವಿರೋದು ಬೆಂಗಳೂರಾದರೂ ನಮ್ಮನೆ ಇರೋದು ಒಂದು ಥರಾ ಹಾಳು ಕೊಂಪೇಲಿ. ಎಲ್ಲಾ ದೊಡ್ಡ ದೊಡ್ಡ ಬಂಗಲೆಗಳು, ಮಧ್ಯೆ ಮಧ್ಯೆ ನಮ್ಮಂಥವರ ಬಂಗಲೆಗಳು, ಮನುಷ್ಯರೂ ಒಂದು ಥರಾ ಮನುಷ್ಯರು. ಮುಕ್ಕಾಲುಪಾಲೆಲ್ಲ ರಿಟೈರ್ಡ್ ಆಸಾಮಿಗಳು. ಸಾಯಂಕಾಲವಾದರೆ ಚೀಲ ಹಿಡಿದು ವಾಕಿಂಗ್ ಹೋಗಿ ಪೇಟೆಯ ಧಾರಣೆಗಳನ್ನ ವಿಚಾರಿಸಿಕೊಂಡು ಬರುವ ಮನುಷ್ಯರೇ ಜಾಸ್ತಿ ನಮ್ಮ ಕೊಂಪೇಲಿ. ನಮ್ಮ ಕೊಂಪೇಗೆ ತಕ್ಕಹಾಗೆ ಒಂದೇ ಅಂಗಡಿ. ಎಲ್ಲಕ್ಕೂ ಅದೇ ಅಂಗಡಿ. ವೀಳೇದೆಲೇಗೂ ಅದೇ—ವಿನೋಲಿಯ ಸೋಪಿಗೂ ಅದೇ—ವಿಕ್ಟರಿ ಬೀಡೀಗೂ ಅದೇ—ಅಂಗಡಿ. ಅಲ್ಲಿ ಹೇಳಿದ್ದೇ ಬೆಲೆ; ಹಾಕಿದ್ದೇ ಟೋಪಿ. ಅಂಗಡಿಯಾತ ನನಗೆ ಸ್ವಲ್ಪ ಪರಿಚಿತನಾಗಿದ್ದವನಾದ್ದರಿಂದ ನನಗೂ ಆತನನ್ನ ಆಗಾಗ ಆದರಿಸೋಣ ಅನ್ನಿಸುತ್ತಿತ್ತು.

ಅದಕ್ಕೇ ಮೊನ್ನೆ ಸಾಯಂಕಾಲ ಹಾಗೇ ಅಂಗಡಿಯೊಳಕ್ಕೆ ನುಗ್ಗಿ ಆತನಿಗೆ "ಏನಯ್ಯ" ಅನ್ನುತ್ತಾ, ಪೆಪ್ಪರಮೆಂಟು ಸೀಸೆಯಲ್ಲಿ ಕೈಹಾಕಿ ಶುಂಠಿ ಪೆಪ್ಪರಮೆಂಟೊಂದನ್ನ ಆರಿಸಿ ತೆಗೆದು ಬಾಯಲ್ಲಿ ಹಾಕಿಕೊಂಡೆ. "ಹ್ಯಾಗಿದೆ ವ್ಯಾಪಾರ" ಅಂದೆ. ಪ್ರತ್ಯುತ್ತರವಾಗಿ ಆತ ಆಳೋದೊಂದು ಬಾಕಿ, "ಅಯ್ಯೋಬಿಡಪ್ಪ, ಏನು ವ್ಯಾಪಾರ" ಅಂದು ಮುಗಿಸಿದ. ನನಗೇಕೋ ಬಹಳ ಕನಿಕರ ಆಗಿಹೋಯಿತು. ಸುತ್ತ ನೋಡಿದೆ. ಅಂಗಡಿ ಖಾಲಿ. ಡಬ್ಬಗಳು ಖಾಲಿ. ಕೈಪೆಟ್ಟಿಗೆ ಖಾಲಿ. ಎಲ್ಲೆಲ್ಲೂ ಜೇಡರಗೂಡುಗಳ ಬೀಡು. ಹೇಳುವರಿಲ್ಲ ಕೇಳುವರಿಲ್ಲ. ಆತನ ಮುಖ ನೋಡಿದರೆ ಏನಾದರೂ ಉಪಕಾರ ಮಾಡಿಯೇ ಬಿಡೋಣವೆನ್ನಿಸಿತು. ಇನ್ನೊಂದು ಶುಂಠಿ ಪೆಪ್ಪರಮೆಂಟು ಬಾಯಲ್ಲಿ ಹಾಕಿಕೊಂಡು "ಬರ್ತೀನೆ" ಅಂದದ್ದೂ ಹೊರಟು ಬಂದೆ.

ದಾರಿಯಲ್ಲಿ ರಂಗನಾಯಕಮ್ಮ ಸಿಕ್ಕಿದರು. ಬಸ್ಸಿಗೆ ಕಾಯುತ್ತಿದ್ದರೋ ಏನೋ ಕೈಯಲ್ಲಿ ಚೀಲ ಇತ್ತು. "ಮಾರ್ಕೆಟ್ಟಿಗೇ" ಅಂದೆ. "ಹುಂ" ಅಂದರು. "ಇನ್ಮೇಲೆ ಆಲೂಗೆಡ್ಡೆಗೆ ರೇಷನ್ನಂತೆ" ಅಂದೆ. "ಓ" ಅಂದರು. "ಪೇಟೇಲಿ ಆಲೂಗೆಡ್ಡೇನೇ ಇಲ್ಲವಂತೆ" ಅಂದೆ. ರಂಗನಾಯಕಮ್ಮನವರು ಏನೋ ಯೋಚಿಸಿ ಬಸ್ಸನ್ನ ಮರೆತು ಕೊಂಪೆ ಅಂಗಡಿ ಕಡೆಗೆ ದಡದಡನೆ ಉರುಳಿದರು. ಅಷ್ಟರಲ್ಲಿ ಎದುರಿಗೆ ಶಾಮಯ್ಯ ಬಂದರು. ಒಳ್ಳೇವರು ಶಾಮಯ್ಯ, ರಿಟೈರ್ಡ್ ಎಸ್. ಡಿ. ಓ. ಕೈಯಲ್ಲಿ ಕೊಡೆ ಇತ್ತು. ಹಿಂದೆ ಬುಟ್ಟಿ ಹೊತ್ತ ಹುಡುಗ ಒಬ್ಬನಿದ್ದ. "ವಾಕಿಂಗೊ" ಅಂದೆ! "ಇಲ್ಲ ಮಾರ್ಕೆಟ್ಟು" ಅಂದರು. "ಏನು, ನಾಳೆಯಿಂದ ಗೋಟಡಿಕೆ ರೇಷನ್ನಂತೆ. ಪೇಟೇಲಿ, ಅಡಿಕೇನೇ ಇಲ್ಲವಂತೆ, ಹೌದೇ?" ಅಂದೆ. "ಹೌದೇ" ಅಂತ ಶಾಮಯ್ಯ

ನವರೂ ಕೇಳಿ ಕೊಂಪೆ ಅಂಗಡಿ ಕಡೆಗೆ ಓಡಿದರು.

ಇನ್ನು ಮುಂದೆ ಅಳಗಿರಿ ಸ್ವಾಮಿಯವರು ಸಿಕ್ಕಿದರು. ಒಳ್ಳೇವರು ಅಳಗಿರಿ ಸ್ವಾಮಿ, ಜವಳಿ ವ್ಯಾಪಾರಿಗರು. "ಕಾರು ಏನಾಯಿತು ?" ಅಂದೆ "ಪೆಟ್ರೋಲಿಲ್ಲ" ಅಂದರು. "ಅಂತೂ ನೋಡಿ, ಬೆಂಕಿಪಟ್ಣಕ್ಕೂ ಬಂದಲ್ಲ" ಅಂದೆ. "ಏನ್ಬಂತು" ಅಂದರು "ನಾಳೆಯಿಂದ ಬೆಂಕಿಪಟ್ಣ ರೇಷನ್ ಅಂತೆ, ಪೇಟೇಲಿ ಒಂದೊಂದೇ ಅಂತೆ ಬೆಂಕಿ ಪಟ್ಣ ಕೊಡೋದು." ಅಂದೆ. "ಓ ?" ಅಂದು ಅಳಗಿರಿ ಸ್ವಾಮಿಯವರು ಹಿಂದೆ ತಿರುಗಿದರು.

ಹೀಗೇ-ಗೌರಮ್ಮನವರಿಗೆ ಗೇರುಪಪ್ಪು ಗಂಗಾಧರಯ್ಯನವರಿಗೆ ಗ್ಲೂಕೋಸು, ಸೀತಾರಾಮಶೆಟ್ಟಿಗೆ ಸೀಗೇಕಾಯಿಪುಡಿ-ಜ ಡ್ಜಿ ಜಯರಾಮಯ್ಯನವರಿಗೆ ಜಂಬಿಸ್ಕತ್ತು-ಹೇಮಾವತಿ ಬಾಯಿ ಅವರಿಗೆ ಹೇರಾಯಿಲ್ಲು-ನಾನಾವಿಧದವರಿಗೆ ಬೇರೆ ಬೇರೇ ಥರದ ರೇಷನ್ನು ಮಾಡಿದೆ.

ನಿನ್ನೆ ಬೆಳಿಗ್ಗೆ, ನಿಜವಾಗಿಯೂ ರೇಷನ್ನಾಗಿದ್ದ ಸೀಮೆಎಣ್ಣೆ ಇದೆಯೇ ಅಂತ ಕೊಂಪೆ ಅಂಗಡಿಯಲ್ಲಿ ವಿಚಾರಿಸಿದೆ. ಆತ "ಓ, ಇದೆ" ಅಂದ. ಶುಂಠಿಪೆಪ್ಪರಮೆಂಟನ್ನೆತ್ತಿ ಬಾಯಿಗೆ ಹಾಕಿಕೊಂಡು 'ಹ್ಯಾಗಿದೆ ವ್ಯಾಪಾರ ?" ಅಂದೆ. ಆತ 'ಪರವಾಯಿಲ್ಲ" ಅನ್ನುತ್ತ ಸೀಮೆಯೆಣ್ಣೆ ಅಳೆದ.

ಎಸ್. ಎನ್. ಶಿ.

—o—



ಡಾಕ್ಟರ್—' ನೋಡ್ದೆ ಸ್ವಾಮಿ ಚೆನ್ನಾಗಿ ನೋಡ್ದೆ......ಆದ್ರೆ ನೀವ್ಹೇಳೋಷ್ಟು ಹೊಟ್ಟೆನೋವಿಲ್ವಲ್ಲ ?"

# ಹಾ ! ಪ್ರೇಮಿ!

—o—

" ಕೇಫ "

ಸ್ನೇಹಿತರಲ್ಲೆಲ್ಲಾ ಅತಿ ಬೇಸರಿಕೆ ಮಾಡುವವರು ಅಂದರೆ ಹೊಸದಾಗಿ ಮದುವೆಯಾದವರು ಅಥವಾ ಪ್ರೇಮರಂಗದಲ್ಲಿಳಿದಿರುವವರು ಇವರಿಬ್ಬರಲ್ಲಿ ಯಾರು ಜಾಸ್ತಿ, ಯಾರು ಕಮ್ಮಿ ಅಂತ ಹೇಳುವುದಕ್ಕಾಗದು. ಅಬ್ಬ! ಅವರಿಗೆ ಬೇರೆ ಯೋಚನೆಯಿಲ್ಲ, ಬೇರೆ ಧ್ಯಾನವಿಲ್ಲ, ಬೇರೆ ಜ್ಞಾನವಿಲ್ಲ. ಯಾರ ಜೊತೆಯಲ್ಲೇ ಇರಲಿ, ಯಾವ ಕೆಲಸವೇ ಆಗಲಿ, ಯಾವ ಮಾತೇ ಆಗಲಿ—ಕೊನೆಗೆ ತಮ್ಮ ಪ್ರಿಯ ಭಾಂಧವಿಯ ಯೋಚನೆಯಲ್ಲಿಯೇ ಮುಕ್ತಾಯವಾಗಬೇಕು.

ನಾನೀಗ ಒಬ್ಬೊಂಟಿಗನಾಗಿಯೇ ಇದ್ದೇನೆ. ಅದೇನು—ನನಗಿನ್ನೂ ವಿವಾಹವಿಲ್ಲವ್ವರಿಂದಲ್ಲ. ನನಗೂ ಈ ವರ್ಷದ ಮೊದಲಲ್ಲಿ ಏಳೆಂಟು ಜನ ಆಪ್ತ ಸ್ನೇಹಿತರಿದ್ದರು. ಐದು ಜನ ಒಬ್ಬರ ಹಿಂದೆ ಒಬ್ಬರು ದಾಂಪತ್ಯ ಜೀವನಕ್ಕಿಳಿದರು. ಇನ್ನಿಬ್ಬರು ಹೊಸಲಿನ ಮೇಲೆ ನಿಂತಿದ್ದಾರೆ. ಮತ್ತೊಬ್ಬ ನುಗ್ಗಬೇಕೆಂದು ಹಗಲಿರುಳು ತಪಸ್ಸಿನಲ್ಲಿದ್ದಾನೆ. ಒಬ್ಬೊಬ್ಬರೂ ಒಂದೊಂದು ತರಹ. ಅಂತೂ ಎಲ್ಲರೂ ನನ್ನ ಕೈಬಿಟ್ಟಹಾಗೆಯೇ. ಅಲ್ಲಾ ! ಅವರುಗಳ ಹಿಂದಿನ ಸರಳತೆ ಏನಾಯಿತು ? ಮೊದಲಿನ ಹಾಗೆ ನನ್ನಂತೂ ಅವರು ಹುಡುಕಿಕೊಂಡು ಬರುವುದು ಬೇಡ, ನಾನೇ ಅವರನ್ನು ನೆಚ್ಚಿಕೊಂಡು ಹೋದರೂ ದುರ್ಲಭ. ಅದರಲ್ಲೂ ಮದುವೆಯಾದವರ ಮನೆಗೆ ಹೋದರೆ ಏಕೋ "ನಾಯಿಗಳಿವೆ ಎಚ್ಚರಿಕೆ'' ಅಂತ Board ಇರೋ ಹಾಗಿರುತ್ತೆ.

ಮೊನ್ನೆ ರಾಜನ ಮನೆಗೆ ಹೋಗಿದ್ದೆ. ಅವನಿಗೆ ಮದುವೆಯಾಗಿ ಇನ್ನೂ ಆರು ತಿಂಗಳು. ನಾನವನನ್ನು ನೋಡಿ ನಾಲ್ಕು ತಿಂಗಳಾಗಿತ್ತು. ಹುಡುಗ ಹೇಗಿದ್ದಾನೋ ನೋಡೋಣವೆಂದರೆ—ಸರಿ ನಾನು ಗೇಟಿಂದಾಚೆಯೇ ಅರ್ಧ ಘಂಟೆ ಕಾಯಬೇಕಾಯಿತು. ಆಮೇಲೆ ರಾಜ ಕೆಮ್ಮುತ್ತ ಹೊರಕ್ಕೆ ಬಂದ. ಹಿಂದೆಯೇ ಉಸ್ತುವಾರಿಗೆ ರಾಣಿ ಸಾಹೇಬರು ಕಂಡುಕಾಣದಹಾಗೆ ಬಾಗಿಲ ಮರೆಯಲ್ಲಿ. ರಾಜ ನಗಲಾರದೆ ನಗುತಾ, ಓಹೋ ಏನಯ್ಯಾ—ಅಪರೂಪಂ ಚೋರ ದರ್ಶನಂ ಅನ್ನೋ ಹಾಗೆ ಬಂದೆ. ಬಾ ಒಳಗೆ" ಅಂತ ಒಳ್ಳೆ ಮಾತಿನಲ್ಲೇ ನನ್ನನ್ನ ಚೋರನೆಂದು ಕರೆದು ಒಳಕ್ಕೆ ಕರೆದುಕೊಂಡು ಹೋದ. ಅವನ ಆಫೀಸ್ ರೂಂ ಹಿಂದೆ ನೋಡಿದ್ದೆ. ಆದರೂ ಏನು ವ್ಯತ್ಯಾಸ! ಎಲ್ಲೆಲ್ಲೂ ಅವನ ಹೊಸ ಜೀವನದ ಸೊಗಸು ತುಂಬಿ ತುಳುಕುತ್ತಿತ್ತು. ಒಂದು ಕಡೆ ಅವನ ಟೈ, ಕಾಲುಚೀಲ—ಮೇಲೆ ಒಂದು ಜಾಕೆಟ್, ಒಂದು ಕಡೆ ಷರಾಯಿ, ಸೀರೆ, ಕೋಟು, ಹ್ಯಾಟ್, ಇನ್ನೊಂದು ಜಾಕೆಟ್, ಒಂದು ಕಾಲರ್. ಒಂದು ಮೂಲೇಲಿ ಷೂ, ಪಂಪ್

ಷೂ, ಚಪ್ಪಲಿ, ಹೈಹೀಲ್ ಷೂ—ಎಲ್ಲಾ ಎರಡು ಸೈಜಿನವು ಅವನ ಟೇಬಲ್ ಮೇಲೊ—ದೊಡ್ಡ ಕಾರ್ಖಾನೆಯೇ—ಸ್ನೋ, ಪೌಡರ್, ರೇಜರ್, ಬ್ರಷ್, ಸೆಂಟ್, ಕುಂಕುಮದ ಭರಣಿ— ಇತ್ಯಾದಿ ನನಗಂತೂ ಯಾವ ಕಡೆಯೂ ನೋಡುವುದಕ್ಕಾಗದೆ, ಇನ್ನೂ ಇದುವರೆವಿಗೂ ಬರಿಯದಾಗಿದ್ದ ಸೀಲಿಂಗ್ ಕಡೆ ನೋಡುತ್ತಿದ್ದೆ. ಸ್ವಲ್ಪ ಹೊತ್ತಾದಮೇಲೆ " ಏನಯ್ಯಾ ರಾಜ, ಊರಲ್ಲೇ ಇದ್ದೀಯಾ? ಇವತ್ತಾದರೂ ಹೊರಕ್ಕೆ ಬರುತ್ತೀಯಾ? ಬಾ ಎಲ್ಲಾದರೂ ಹೋಗೋಣ" ಅಂದೆ ಅಷ್ಟರಲ್ಲಿ ಪಕ್ಕದ ರೂಂನಲ್ಲಿ ಯಾರೋ ಕೆಮ್ಮಿದ ಹಾಗಾಯಿತು. ರಾಜ, ನನ್ನನ್ನು ಓರೆಗಣ್ಣಿನಿಂದ ನೋಡಿ (ನಾನಿನ್ನೂ ಮೇಲೆ ನೋಡುತ್ತಿದ್ದೆ) ಒಳಗೆ ಹೋದ. ಹತ್ತು ನಿಮಿಷದ ಮೇಲೆ ತಿರುಗಿ ಬಂದು "ಅಯ್ಯಾ, ಇವತ್ತು ಕ್ಷಮಿಸಯ್ಯಾ, ನಂಗೆ ಮೈನಲಿ ಸ್ವಸ್ಥವಿಲ್ಲ ಏನೋ ಎಣ್ಣೆ ನೀರು ಹಾಕುತ್ತಾಳಂತೆ, ಮುಂದಿನವಾರ Sure ಕಣೊ" ಅಂದ. ಅದೇ ಸಾಯಂಕಾಲ ರಾಜ ರಾಣಿ ಇಬ್ಬರೂ Neo Mysore Cafe—ಲೇಡೀಸ್ ಕಂಪಾರ್ಟ್‌ಮೆಂಟ್‌ನಲ್ಲಿ ನಗುತ್ತಿದ್ದದ್ದು ನಾನೇ ಕಂಡೆ. ಪ್ರಾಯಶಃ ನನಗೆ ಠೋಕರ್ ಕೊಟ್ಟ ವಿಷಯವನ್ನೇ ನೆನೆಸಿಕೊಂಡು—ಅಂತ ಕಾಣುತ್ತೆ.

ನನ್ನ ಸ್ನೇಹಿತ ಕಿಟ್ಟೂಗೆ ಬರೋ ತಿಂಗಳು ಮದುವೆ. ನಾನವನ ಹತ್ತಿರ—ಅಂದರೆ ಅವನು ನನ್ನ ಹತ್ತಿರ—ಸರಿಯಾಗಿ ಮಾತನಾಡಿ ಒಂದು ತಿಂಗಳಾಯಿತು. ಯಾವಾಗ ನೋಡಿದರೂ ಅವನ ಹೆಣ್ಣಿನ ಕಡೆ ಸಂಭಂದದ ಮಧ್ಯದಲ್ಲೇ ಅವನು ಓಡಾಡಿ ಬೆಳಿಗ್ಗೆ ಆದರೆ ಹೆಣ್ಣಿನ ತಂದೆ, ಮದ್ಯಾಹ್ನ, ಹೆಣ್ಣಿನ ಅಣ್ಣಂದಿರು, ಸಾಯಂಕಾಲ ಹೆಣ್ಣಿನ ತಮ್ಮಂದಿರು. ಮಧ್ಯೆ ಮಧ್ಯೆ ಹೆಣ್ಣಿನ ಚಿಕ್ಕಪ್ಪ ದೊಡ್ಡಪ್ಪಂದಿರು, ಅಕ್ಕ ತಂಗಿಯರು ಇತ್ಯಾದಿ ಇತ್ಯಾದಿ. ಅಕಸ್ಮಾತ್ ಒಬ್ಬನೇ ದಾರಿಯಲ್ಲಿ ಸಿಕ್ಕಿದ ಅಂದರೆ ಎಲ್ಲೂ ಇಲ್ಲದ ಅವಸರ. Hullow ಅನ್ನುವುದಕ್ಕೆ ಸಹಾ ಪುರುಸತ್ತಿಲ್ಲ "ಅಯ್ಯಾ ಈಗ Time ಇಲ್ಲ ನನ್ನ Father-in-law ಗೆ ಒಳ್ಳೆ ಉಂಡೆನಶ್ಯ ಬೇಕಂತೆ" ಅಂತ ಕಂಬಿ ಕಿತ್ತ. ಅಬ್ಬ Father-in-law ಅನ್ನುವಾಗ ಆ ಗಂಭೀರ ಆ ಜಂಭ—ಎಷ್ಟು ದಿನವಿರುತ್ತೋ ನೋಡಬೇಕು.

ಎಲ್ಲರನ್ನೂ ಮೂಲೆಗೆ ಕೂರಿಸುವವನು ಅಂದರೆ ನನ್ನ ಸ್ನೇಹಿತ ಪದ್ಮನಾಭ ರಾವ್. ಅವನಿಗೆ ಮದುವೆ ಹುಚ್ಚು ಹಿಡಿದಹಾಗಿದೆ—ಮದುವೆಗಾಗಿ ತಪಸ್ಸು ಮಾಡುವ ಜಾತಿ ನಿಜವಾಗಿ ಹಿಮಾಲಯಕ್ಕೋ, ಮಾನಸಸರೋವರಕ್ಕೋ, ದಂಡಕಾರಣ್ಯಕ್ಕೋ ಹೊರಟುಹೋದರೆ ಎಷ್ಟೋ ವಾಸಿ. ನಾನೂ ಅವನೂ ಈಗ್ಗೆ ಒಂದು ತಿಂಗಳಿಂದ ಬೇರೆಯಾಗಿದ್ದೇವೆ. ಮೊದಲು ಒಂದೇ ರೂಂನಲ್ಲಿದ್ದೆವು. ಅವನಿಗೆ ಹುಚ್ಚು ಹಿಡಿದು ಸುಮಾರು ಮೂರು ತಿಂಗಳಾಯಿತು. ನಂಗೆ ಯಾವ ಸಮಾಚಾರವು ಗೊತ್ತಿಲ್ಲ. ಆದರೂ ಅವನ ಜೊತೆ ನಂಗೆ ಬರುಬರುತ್ತ ಬೇಜಾರಾಗಿ ನಾನೇ ಬಿಡಬೇಕಾಯಿತು. ಒಂದು ದಿನ ಇದ್ದಕ್ಕಿದ್ದ ಹಾಗೆಯೇ ಬಂದ. "ನಾನು ಇನ್ನು ಮೇಲೆ ರಾತ್ರಿ ಹೊತ್ತು ಊಟ ಮಾಡುವುದಿಲ್ಲ—ಉಪವಾಸ'' ಅಂದ. ಸರಿ

ಅಂದೆ. ಮತ್ತೊಂದುದಿನ ಬಂದ "ಇನ್ನು ಮೇಲೆ ಸಿನಿಮಾ ನೋಡುವುದಿಲ್ಲ" ಅಂದ. ಅದಕ್ಕೂ ಸರಿ ಅಂದೆ. ಇನ್ನೊಂದು ದಿನ ಬಂದ "ಇನ್ನು ಮೇಲೆ ಪ್ರತಿ ದಿನ ಬೆಳಗಿನ ಝಾವದಲ್ಲೆದ್ದು ನವಗ್ರಹ ಗುಡೀಗೆ ಹೋಗುತ್ತೀನೆ. ಗುರುವಾರ ಗುರುಗಳ ದೇವಸ್ಥಾನ'' ಅಂದ ನಾನು "ಧಾರಾಳವಾಗಿ ಹೋಗು, ನನ್ನನ್ನು ಏನಾದರೂ ಎಬ್ಬಿಸಿದರೆ ನಿನ್ನ ತಲೆ ಎರಡುಚೂರು'' ಅಂದೆ ಎರಡು ದಿನವಾದಮೇಲೆ ಒಂದು Photo ತಂದ. ಅಮೇಲಂತೂ ನನ್ನ ಹತ್ತಿರ ಮಾತು ಕತೆಯೇ ನಿಂತು ಹೋಯಿತು. ಬೆಳಿಗ್ಗೆ ಆದರೆ ಆ Photo. ಸಾಯಂಕಾಲವಾದರೆ ಆ Photo. ಮಧ್ಯಾಹ್ನದಲ್ಲಿ ಆ Photoಗೆ ಕುಂಕುಮ ತರುವುದಕ್ಕೆ ಲಕ್ಷ್ಮೀ ಗುಡೀಗೆ ಎರಡು ಮೈಲಿ ನಡೆದು ಹೋಗುತ್ತಿದ್ದ. ನಾನೂ ಒಂದು ದಿನ ಆ Photo ನೋಡಿದೆ. ಯಾವುದೋ ಹೆಣ್ಣೊಂದು, ಸದ್ಯ ನನಗೆ ಭಯವಾಗಿತ್ತು—ಶಾಂತಾ ಆಪ್ಟೆಯೋ, ಲೀಲಾ ದೇಸಾಯಿಯೋ ಅಂತ. ಯಾವುದೂ ಅಲ್ಲ. ಸರಿ—ಪದ್ಮನಾಭ, ಅವನ ಪ್ರೇಯಸಿಯ Photo ಇವೆರಡರ ಮಧ್ಯದಲ್ಲಿ ನನ್ನ ಪಾಡು—ಬರುಬರುತ್ತ ನಂಗೆ ಹುಚ್ಚು ಹತ್ತುವಂತಾಯಿತು. ಇವೆಲ್ಲಕ್ಕೂ ಮುಕ್ತಾಯಮಾಡಿದ್ದು ಅಂದರೆ—ಒಂದು ರಾತ್ರಿ ಸುಮಾರು ಎರಡುಘಂಟೆ ಸಮಯ. ನನ್ನ ಪ್ರಿಯಮಿತ್ರ ನನ್ನ ಸುಖವಾದ ನಿದ್ರೆಯಿಂದ ಎಬ್ಬಿಸಿದ. "ಲೋ ನಿಂಗ್ಯಾರಾದ್ರೂ ಒಳ್ಳೆ Astrologer ಗುರುತ್ತಿದ್ದಾರೇನೋ'' ಅಂದ. ನಂಗಂತೂ ರೇಗಿಹೋಯಿತು. "ಲೋ ಕಾಪ್ರೀ, ಸುಮ್ನೇ ಬಿದ್ಕೊಳ್ಳೀಯೋ ಇಲ್ವೋ'' ಅಂತ ತಲೆಯ ಮೇಲೆ ಒಂದು ಬಿಟ್ಟು ನಾನೂ ಮಲಗಿದೆ. ಮಾರನೇ ದಿನ ನನ್ನ ಸ್ನೇಹಿತನನ್ನೂ ಅವನ ನೆಚ್ಚಿನ Photo ವನ್ನೂ ಆ ರೂಮಿಗೇ ಬಿಟ್ಟು ನಾನು ಬೇರೆಯಾದೆ.

ಈಗ ನಾನೊಬ್ಬೊಂಟಿಗನೇ.

---

ತಿಮ್ಮ:—ಬುಡಪ್ಪ! ಮೂರು ಹೊತ್ತೂವೆ ನನ್ನೆಂಡ್ತಿ ಆ ಹಿಂದಿನ ಗಂಡನ್ನೇ ನೆನೆಸಿಕೊಂಡು ಅಳ್ತಾಳಲ್ಲಾ, ಅಂತೀನಿ.

ಬೊಮ್ಮ:—ನೀನು ಪುಣ್ಯಾ ಮಾಡಿದ್ದಿ! ನನ್ನೋಳು ಏನು ಮಾಡ್ತಾಳೆ ಅಂತೀಯಾ? ಮುಂದಿನ ಗಂಡನ್ನೇ ನೆನೆಸಿಕೊಂಡು ಅಳ್ತಾಳಲ್ಲಾ, ಏನು ಸಾಯೋಣ?

# ಮಾನಾವಸಾನ

---

ಮ॥ರಾ॥ ಶ್ರೀ ಎಸ್. ವಿ. ಪರಮೇಶ್ವರರವರ "ದಿವಾವಸಾನ" ಎಂಬ
ಕವನದಣಕುವಾಡ.

(ಶ್ರೀ ಎಸ್. ವಿ. ಪರಮೇಶ್ವರಭಟ್ಟರಲ್ಲಿ ಕ್ಷಮೆ ಬೇಡಿ)

ಸನ್ನಿಹಿತವಾಗುತಿದೆ, ಡಿಬೇಟಿನಾ ಹೊತ್ತು ;
ಸಾರುತಿದೆ ತಳಮಳಿಸಿ ಮಾನಕಪಮೃತ್ಯು ;
ಮೈ ಬೆವರಿ ಸುರಿಯುತಿದೆ ಜೋಗ ಜಲದಂತೆ ;
ಹ್ರಸ್ವವಾಗುತಲಿಹುದು ನಾಲಗೆಯು ನುಣು—
ನುಣಿಚಿ ಗಂಟಲಲಿ, ಮುದುರುತಿದೆ ;
ಶ್ವಾಸಸಾಗರದಂತೆ ನಡುಗಿ ಬುಸುಗುಟ್ಟುತಿದೆ,
ಮೂಕಾಂಬಿಕೆ ಬಲಿಗೊಟ್ಟಂತೆ, ಲಕ್ಷ್ಮಾಂತ—
—ಪ್ರೇಕ್ಷಕರು ಪರಿಹಾಸಗೈಯುತಿರೆ ಹೊ ಎಂದು !
ಪ್ರೇತಕೂಟಗಳನಣಕಿಸುತ, ಭಾಷಣಕೆ—
ಹೂಂಕರಿಪ ಭೀಮರೆದುರಲೊಂಟಿ ಕೀಚಕನಂತೆ,
ಕತ್ತಲಲಿ ಕಂಡ ಪಾಂಡಿನಲಿ ಹಗಲುರುಳಿದನೇ !
ಭಾಷಣಾಂಗಳದ ಮಂಗಳದ ಮಾಂಗಲ್ಯಕಾಗಿಯೇ,
ಮೊರೆಯನಿಡುವನು ದೇವ ! 'ನಾಲಿಗೆಯ ಮಾಟು'
ಅವಿತುಕೊಳ್ಳುವೆನಿನ್ನು, ಬೇಡ ! ಡಿಬೇಟಿನಲಿ 'ಸೀಟು

"ಕೋಸಂದ್ರಿ"

# ಸುದಾಮ ತಂತ್ರ

## (೧)

ಸ್ವಾಮಿ, ಸ್ಯಾನಿಟರಿ ಇನ್‌ಸ್ಪೆಕ್ಟರೆ! ಏನು, ತಮ್ಮ ಗಮನ ಈ ನಮ್ಮ ಬಡ ರಸ್ತೆಯಕಡೆ ಬಿದ್ದಹಾಗೆಯೇ ಕಾಣುವುದಿಲ್ಲವಲ್ಲ! ಇಲ್ಲಿ ನೋಡಿದಿರಾ, ಈ ಚಪ್ಪಡಿ ಕಲ್ಲುಗಳು ಮತ್ತು ಇಟ್ಟಿಗೆಗಳ ರಾಶಿ ಬಿದ್ದು ಚರಂಡಿ ಒಡೆದುಹೋಗಿ, ರಸ್ತೆಯಲ್ಲೆಲ್ಲಾ ನೀರು ನಿಂತು, ಕೊಳೆತು, ಹೇಗೆ ನಾರುತ್ತಿದೆ!—ಸೊಳ್ಳೆ ನೊಣಗಳ ಸುಗ್ಗಿ! ಅಲ್ಲಿ ನೋಡಿ, ರಸ್ತೆ ಕಿತ್ತುಹೋಗಿ ಹೇಗೆ ಗುಣಿಗಳಾಗಿಬಿಟ್ಟಿವೆ—ಪ್ರತ್ಯೇಕ ಎ. ಆರ್. ಪಿ. ಗುಂಡಿಗಳನ್ನು ತೋಡಿಸಬೇಕಾದ ಪ್ರಮೇಯವೇ ಇಲ್ಲ! ಮುಳ್ಳು, ಗಿಡಗಳನ್ನು ನೋಡಿದಿರಾ, ಎಷ್ಟು ಸೊಂಪಾಗಿ ಬೆಳೆದುಕೊಂಡಿವೆ! ಈ ದೀಪದಕಂಬ ಎಂಟು ತಿಂಗಳ ಹಿಂದೆ ವಾಲಿಕೊಂಡಿದ್ದು ಚೇತರಿಸಿಕೊಂಡೇ ಇಲ್ಲ. ಸಾಯಂಕಾಲವಾದರೆ, ಈ ಪ್ರದೇಶವೆಲ್ಲಾ ಆಯಿಲು ನಗರಕ್ಕೆ ಸೇರಿದ್ದು ಎಂಬುದೇ ಮರೆತುಹೋಗಿ ನಮ್ಮ ಮೊಸಳೆ ಗ್ರಾಮದ ಜ್ಞಾಪಕವನ್ನೇ ಕೊಡುತ್ತೆ!........ಅಲ್ಲ, ಸ್ವಾಮಿ! ಈ ಇಪ್ಪತ್ತನೆ ಶತಮಾನದಲ್ಲಿಯೂ........"

"ಸ್ವಾಮಿ! ತಾಳಿ........ದಯವಿಟ್ಟು ........ಸ್ವಲ್ಪ !........(ಕಿವಿಯ ಹತ್ತಿರ ಬಂದು) ಅಲ್ಲಿ ರಾಶಿ ಬಿದ್ದಿರುವ ಕಲ್ಲು ಇಟ್ಟಿಗೆಗಳು ಯಾರದು ಗೊತ್ತೆ? (ಇನ್ನೂ ಪಿಸುಮಾತಿನಲ್ಲಿ) ಪ್ರಸಿದ್ಧ ನಗರ ಪಿತೃಗಳಲ್ಲೊಬ್ಬರಾದ ವೋಟುಕೊಡಪ್ಪನವರದು! ಅದನ್ನು ತೆಗಿಸಿಬಿಡಬೇಕೆಂದು ಆರು ತಿಂಗಳ ಹಿಂದೆ ನಾನು ಸೂಚಿಸಿದಾಗ, ಅವರು ಮಾಡಿದ ರಂಪದಲ್ಲಿ ನನ್ನ ಕೆಲಸಕ್ಕೇ ಸೊನ್ನೆ ಬೀಳುವುದರಲ್ಲಿತ್ತು—ಮತ್ತೆ ಆ ಮಾತನ್ನೆತ್ತುವುದಕ್ಕೆ ನಾನೇನು ಹುಚ್ಚನೆ? ನಾನು ಮಕ್ಕಳೊಂದಿಗ ಸ್ವಾಮಿ!"

"ಹಾಗಾದರೆ ಇದಕ್ಕೇನೂ ಮಾಡುವುದಕ್ಕಾಗುವುದಿಲ್ಲವೆ? ಏನು ಸ್ವಾಮಿ, ನಾವು ತೆರಿಗೆಗಳನ್ನು ಕೊಡುವುದಿಲ್ಲವೆ?"

"ಇರಬಹುದು ಸ್ವಾಮಿ, ಇರಬಹುದು. ತತ್ವದಲ್ಲಿ ಅದೆಲ್ಲಾ ಸರಿಯೆ ಕಾರ್ಯತಃ ಅದರ ವಿಚಾರವೇ ಬೇರೆ! ಇದು ಲೌಕಿಕ ಪ್ರಪಂಚ ಸ್ವಾಮಿ! ನಾವು ನೌಕರರು, ಹೇಗೆ ಗಾಳಿ ಬೀಸುವುದೋ ಹಾಗೆ ತಳ್ಳಿಕೊಂಡು ಹೋಗಬೇಕಾಗಿದೆ. ಅಲ್ಲದೆ ಈ ನಿಮ್ಮ ಬೀದಿಯೋ ಒಂದು ಮೂಲೆ. ಯಾವ ಅಧಿಕಾರಿ, ಯಾವ ದೊಡ್ಡಮನುಷ್ಯರು, ಯಾವ ಮಂತ್ರಿ ಮಹಾರಾಜರು ತಿರುಗುವ ರಸ್ತೆ, ಅದು ಹೇಳಿ ಮೊದಲು?........

"ಸರಿ, ಬಿಡಿ, ಹಾಗಾದರೆ........ಇದಕ್ಕೆ ಮಾರ್ಗವೇ ಬೇರೆ."

(೨)

"ನಗರ ಪಿತೃವರೇಣ್ಯರಾದ ಘನ ಪೌರಸಭಾಧ್ಯಕ್ಷರಲ್ಲಿ ಬಡ ತೆರಿಗೆಗಾರರು ಬರೆದುಕೊಂಡ ಅಹವಾಲು ಏನೆಂದರೆ:

ಈ ಸುಪ್ರಸಿದ್ಧ ಅಯಿಲು ನಗರದ ಹನುಮಂತರಾಯನ ಬಡಾವಣೆಯಲ್ಲಿ ಈಗ ಹದಿನೈದು ವರ್ಷಗಳಿಂದಲೂ ವಾಸವಾಗಿದ್ದೇವೆ ಸ್ವಾಮಿ. ಪ್ರತಿ ಚುನಾವಣೆಯಲ್ಲಿಯೂ ತಮಗೆ ಮತ್ತು ತಮ್ಮ ಸಂಗಡದವರಿಗೆ ತಮ್ಮ ಉಚ್ಚ ಧ್ಯೇಯಗಳಿಗೆ ಮನಸೋತು ನಮ್ಮ ಮತ್ತು ನಮ್ಮ ಸ್ನೇಹಿತರ ಮತಗಳನ್ನು ಮಾಸಲಾಗಿರಿಸಿದ್ದೇವೆ.

ಪರಂತು, ನಮ್ಮ ಬಡ ಮೊಹಲ್ಲೆಯಮೇಲೂ, ಅದರಲ್ಲಿಯೂ ನಮ್ಮ ಕೇವಲ ಬಡ ರಸ್ತೆಯಮೇಲೂ ತಮ್ಮ ಘನ ದೃಷ್ಟಿಯು ಬೀಳುವ ಸುಯೋಗವು ಇನ್ನೂ ಒದಗಿಲ್ಲ. ಹಿಂದೆ ಒಂದು ಸಲ ನಮ್ಮ ಮುಖ್ಯ ಅಧಿಕಾರಿಗಳ ಮಗನೊಬ್ಬನು ದಾರಿತಪ್ಪಿ ನಮ್ಮ ರಸ್ತೆಯಲ್ಲಿ ಬಂದುಬಿಟ್ಟು ಎಡವಿಬಿದ್ದು ಮಂಡಿ ಘಾಯವಾಗಿ ಆಸ್ಪತ್ರೆಗೆ ಸಾಗಿಸಲ್ಪಟ್ಟಾಗ ಪುರಪ್ರಮುಖರು ಮತ್ತು ನಗರಪಿತೃಗಳೆಲ್ಲಾ ನಮ್ಮ ರಸ್ತೆಗೆ ದಯಮಾಡಿದ್ದರು. ಆಗಲೇ ನಮ್ಮ ರಸ್ತೆಯ ಕಾಮಗಾರಿಯೂ ನಡೆದದ್ದು. ಇದು ಕೇವಲ ಆರೇ ವರ್ಷಗಳ ಹಿಂದೆ ಆಗಿದ್ದರೂ, ರಸ್ತೆಯಲ್ಲಿ ವಾಸವಾಗಿರುವ ನಮ್ಮ ಒರಟುಜನರ ವ್ಯಾಪಾರದಿಂದಲೋ ಅಥವಾ ನಮ್ಮ ದುರದೃಷ್ಟದಿಂದಲೋ ಆಗಲೇ ಅವ್ಯವಸ್ಥೆಯಾಗಿದೆ! ಈಚೆಗೆ ಬಿದ್ದು ಕಾಲುಮುರಿದುಕೊಂಡವರೆಲ್ಲರೂ ಕೇವಲ ನಮ್ಮ ಬೀದಿಯ ನಿವಾಸಿಗಳೇ ಆಗಿದ್ದಾರೆ........

ದಯವಿಟ್ಟು ಬಡ ತೆರಿಗೆದಾರರ ಅಹವಾಲಿಗೆ ಮನಗೊಟ್ಟು ನಮ್ಮ ಬೀದಿಯ ಕಡೆಗೆ ತಮ್ಮ ಘನ ಸವಾರಿಯು ಒಂದು ಸಲ ಚಿತ್ತೈಸಬೇಕೆಂದು ಬೇಡುತ್ತೇವೆ. ಅಲ್ಲದೆ, ತಮ್ಮ ಜತೆಯಲ್ಲಿ ಈ ಮೊಹಲ್ಲೆಯ ಪರವಾಗಿ ಚುನಾಯಿತರಾಗಿ ಪೌರ ಸಭಾ ಸದಸ್ಯರಾಗಿರುವ ನಮ್ಮ ಘನ ಪ್ರತಿನಿಧಿಗಳನ್ನೂ ಸಹ ಕರೆತಂದರೆ, ಅವರನ್ನು ಒಂದುಬಾರಿ ನೋಡಿ ಸಂತೋಷಪಡುತ್ತೇವೆ. ಹೋದ ಚುನಾವಣೆ ದಿನಗಳಲ್ಲಿ ಅವರನ್ನು ಕಂಡ ಸವಿನೆನಪುಗಳೇ ಇಂದಿನವರೆಗೂ ನಮ್ಮನ್ನು ಕಾದಿವೆ. ಈಚೆಗೆ ಅವರನ್ನು ಕಾಣದಿದ್ದರೂ ಅವರ ಪರವಾಗಿ ಇಲ್ಲಿ ಬಿದ್ದಿರುವ ಅವರ ಚಪ್ಪಡಿಕಲ್ಲು, ಇಟ್ಟಿಗೆಗಳ ರಾಶಿಯನ್ನು ನೋಡಿಕೊಂಡು ಕಾಲ ಹಾಕುತ್ತಿದ್ದೇವೆ!

ಇಂತೀ ನಮಸ್ಕಾರಗಳು,

ವಿಧೇಯರಾದ ಅಯಿಲು ನಗರದ ಹನುಮಂತರಾಯನ ಬಡಾವಣೆಯ

ಬಡತೆರಿಗೆದಾರರು.

(ಸಹಿ) ಸುದಾಮಪ್ಪ

ಭೀಮಪ್ಪ...." ಇತ್ಯಾದಿ.

* * *

